॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.



ಕೆ. ಪುಟ್ಟಣ್ಣಗೌಡರಿಂದ ವಿರಚಿತವಾದ

# ಅಂಧಕಾಸುರನ ಕಾಳಗ

ಪ್ರಥಮಾವೃತ್ತಿ.

ಶ್ರೀಕೃಷ್ಣಮುದ್ರಣಾಲಯ,

ಉಡುಪಿ.



1928

ಬೆಲೆ: 0—4—0.

॥ ಶ್ರೀಃ ॥

॥ ಶ್ರೀಹರಯೇ ನಮಃ ॥

# ಯ ಕ್ಷ ಗಾ ನ

# ಅಂಧಕಾಸುರನ ಕಾಳಗವು.

ಮತ್ತೇಭವಿಕ್ರೀಡಿತವೃತ್ತ.

ವಸುಧಾಮಂಡಲ ನಾಶದಾತ ಗಿರಿಜಾಪ್ರೀತಾ ಮಹೇಶಾ ಮಹಾ
ವಿಷಪಾನೀ ನತದೇವತಾವರದ ಶ್ರೀಗಂಗಾಧರಾ ಮೋದಮಂ |
ವಿಷಧಾರೀಧರ ಚಂದ್ರಬಿಂಬವರದಾ ಕೈಲಾಸದಾ ಧೀಶ ನೀ-
ಡಸವಾನಂದವ ನಾಗಭೂಷಣ ಮಹೇಶಾ ಶಂಕರಾ ಸಂತತಂ || ೧ ||

ರಾಗ ಸಾಂಗತ್ಯ, ರೂಪಕತಾಳ.

ಚರಣತಲಕೆ ತಲೆ ಬಾಗುವೆ | ಗಿರಿಜೆಯು ತರಳ ಗಣಪ ದಯ | ವಿರಿಸಿ ಪೊರೆಯೊ ಗುಣಶರನಿಧಿ | ಸುರನುತ ಸಿರಿಚರಣಾ || ಪಲ್ಲ || ಬರೆಯುವೆ ಗಣ ರಾಜನೆ ಕೃತಿ | ಬರುವೆಡರುಗಳನು ಕರುಣದಿ | ಪರಿಹರಿಪುದು ಗಿರಿವರನಾ | ತರಳೆಯ ತನುಜಾತಾ || ಚರಣಾಂಬುಜದೊಳಗೆರಗುವ | ಮರಿದುಂಬಿಗೆ ಸು ರನುತಪದ | ಸುರುಚಿರ ಮಧುವನು ಕರುಣಿಸು | ಕರುಣಾಕರ ದೇವಾ || ೧ || ದಂತಿವದನ ಗಜದಾನವ | ನಂತಕ ಪಾಲಿಸು ಕಿಂಕರ | ಸಂತಸದಲಿ ತವ ಪಾ ದವ | ಚಿಂತಿಪೆ ಗಣಪಾಲಾ || ಸಂತತ ಬರುತಿಹ ವಿಘ್ನಗ | ಳಂ ತರಿಯುತ ಪೊರೆ ಗುಣನಿಧಿ | ಚಿಂತೆರಹಿತ ಗಣನುತ ಕಾ | ಲಾಂತಕಸುತ ನೀನೂ || ೨ ||

ಭಾಮಿನಿಷಟ್ಪದಿ.

ಗಿರಿಜೆಯುರಸನ ಪದಕೆ ಲಕ್ಷ್ಮೀ | ವರನ ಚರಣಕೆ ಮಣಿದು ವಾಣಿ ಯೊ | ಳಿರಲುಬೇಕೆಂದೆನುತ ವಾಣೀದೇವಿಯುಳ ಪದಕೇ || ಶಿರವಿರಿಸಿ ಹಿರಿಯ ರಿಗೆ ಭಕ್ತಿಯೊ | ಳೆರಗಿ ಬರೆಯುವೆನಿದನು ಕವಿಗಳ | ಚರಣದೊಳಗಿರಿಸುವೆನು ಶೋಧಿಸಲೆಂದು ಸಂತಸದೀ || ೧ ||

### ದ್ವಿಪದಿ.

ಸೃಷ್ಟಿಪಾಲಕ ಕಮಲಭವನ ಪದತಲವಾ | ಇಷ್ಟದಿಂ ನುತಿಸಿ ಬೇಡು ವೆನರ್ಕಸೊಲವಾ || ೧ || ಕವಿತಿಲಕ ಕಾಳಿದಾಸನ ಪಾದತಲವಾ | ಸುವಿನೋದದಿಂ ನುತಿಸಿ ಸರಸಕವಿಯೆನುವಾ || ೨ || ವರ ಪಂಪ-ರನ್ನ-ಹೊನ್ನರ ಪಾದ ಕೆರಗೀ | ವರ ಷಡಕ್ಷರಿ-ರುದ್ರದೇವರೊಳ್ಮರುಗೀ || ೩ || ಬೇಡಿ ಜಯವನು ಬಳಿಕ ಲಕ್ಷ್ಮೀಶನಡಿಗೇ | ಗಾಢದಿಂದಡಿಗಡಿಗೆ ಪೊಡಮಟ್ಟು ಕಡೆಗೇ || ೪ || ಹರನ ಕಂಗಳ ಗಿರಿಜೆ ಪರಿಹಾಸಕಾಗೀ | ಮರೆವ ಕೈಯಲಿ ಮುಚ್ಚಲಧಿಕತರ ಮಾಗೀ || ೫ || ಕತ್ತಲೆಯು ಲೋಕವನು ಮುಚ್ಚಲದರಿಂದಾ | ಮತ್ತನಂಧಕ ಜನಿಸಿ ತಾನು ಮದದಿಂದಾ || ೬ || ಹರನ ಮೇಲ್ವೈದಿ ಸಂಗರದಿ ಬಸವ ಳಿದೂ | ಹರನ ಮೆಚ್ಚಿಸಿ ಕಡೆಗೆ ಗಣಪದವಿ ಪಡೆದೂ || ೭ || ಮೆರೆದ ಚರಿತೆಯನೆಲ್ಲ ಯಕ್ಷಗಾನದಲೀ | ಬರೆಯುವೆನು ಹರಿಯ ಧ್ಯಾನಿಸುತ ಹರುಷದಲೀ || || ೮ || ನೋಡಿ ಸಜ್ಜನರು ತಪ್ಪಿರಲು ತಿದ್ದುವುದೂ | ಬೇಡುವೆ ವಿದಗ್ಧ ಜನರಿಂಗೆ ಯಶವಹುದೂ || ೯ ||

### ವಾರ್ಧಿಕಷಟ್ಪದಿ.

ಚನ್ನಬಸವ ಪುರಾಣಕಥನಮಂ ಪೇಳುತಿರೆ | ಚನ್ನಬಸಮಂ ಸಿದ್ಧರಾಮಂಗೆ ಕೇಳಿ ಮು | ತ್ತುನ್ನತದ ಹರುಷದಿಂ ಬೆಸಗೊಂಡ ಹರಿಹರರ ವರಕಥಾ ಪೀಯೂಷವಾ || ಇನ್ನು ಬೇಡೆಂಬುವರ್ ಲೋಕದೊಳಗಿಹರೆ ಕೇ | ಳಿನ್ನು ಶಂಕರನಂಧಕಾಸುರನ ಸಂಗರದಿ | ಬನ್ನಬಡಿಸುತ ಕೊಟ್ಟನೇಕೆ ಗಣಪದವಿಯಂ ಪೇಳಬೇಕೆಂದೆರಗಲೂ || ೧ ||

### ರಾಗ ಭೈರವಿ, ಝಂಪೆತಾಳ.

ಪರಮೇಶನೆಂಬವನ | ಶರಣನಾಗಿಹ ರಾಮ | ನೊರೆದ ಮಾತನು ಕೇಳಿ | ವರ ಚನ್ನಬಸವಾ || ಕಿರುನಗೆಯ ಸೂಸುತಲಿ | ಹರನ ಸುಚರಿತೆಯ ಹಗ | ಲಿರುಳು ವಿವರಿಸಲು ಕೇಳ್ | ಕಿರಿದಾಗದೈಸೇ || ೧ || ಆದರಾಲಿಸು ಭಕತ | ನಾದ ನೀ ಬೆಸಗೊಳಲು | ಮಾಧವನ ಗೆಳೆಯ ಗಿರಿ | ಜಾಧವನ ಕಥೆಯೂ || ಹಾದಿಯಲ್ಲವೆ ಪುಣ್ಯ | ಸಾಧಿಸಲು ಕೇಳು ನೀ | ನಾದಿಯಿಂದೊರವೆ ನಾ |

ನಾದರದೊಳದನೂ || ೨ || ಕೇಳಿ ದಣಿಯದು ಕಿವಿಯು | ಪೇಳಿ ದಣಿಯದು ಜಿಹ್ವೆ | ತಾಳಲಾರದು ಚಿತ್ತ | ಕಳವಳವ ಧಿಟವ್ಹೂ || ಕೋಳುಗೊಂಬುದು ಪಾಪ | ಮೇಲಾದ ಸ್ವರ್ಗಪದ | ದಾಲಯವು ದೊರೆಯುವುದು | ಕೇಳಯ್ಯ ರಾಮಾ || ೩ || ಮಂದರಾಧರನ ಸಖ | ನೆಂದೆನಿಸಿದಾ ಶಿವನ | ಬಂಧುರದ ಚರಿತೆಗಳ | ನೊಂದೊಂದ ಬಿಡದೇ || ಮುಂದೆ ಬಣ್ಣಿಸೆ ಶೇಷ | ನಿಂದಾಗದ್ಯೆ ಕೇಳು | ಚಂದದಿಂ ತಿಳಿದ ತೆರ | ದಿಂದ ಬಣ್ಣಿಪೆನೂ || ೪ || ಮಂದಹಾಸದಿ ಕೇಳು | ಮುಂದೆ ಶಂಕಿಸದೆ ನೀ | ಪೊಂದದಿರೆ ಚಿನುಮಯನ | ಮುಂದೆ ಪರ ದೊಳಗೇ || ಎಂದೆನುತ ವಿವರಿಸಿದ | ನಂದು ಸಂತಸದಿಂದ | ಕಂದುಗೊರಳನ ಚರಿತೆ | ಯುಂದವೆಲ್ಲವನೂ || ೫ ||

## ವಾರ್ಧಿಕಷಟ್ಪದಿ

ರಾಮ ಕೇಳ್ ರಜತಾದ್ರಿಶಿಖರದೊಳ್ ವೈಭವದಿ | ಭೀಮಬಲನಹ ನಂದಿ ಘೋರಾಂಗ ಕಪಾಲಿ | ಧೂಮಾಂಗ ಕಾಲಾಪಹರಣ ಘಂಟಾಕರ್ಣ ಮೊದಲಾದ ಪ್ರಮಥರೊಡನೇ || ಸೋಮಶೇಖರನೋಲಗವ ಗೊಡುವೆನೆಂದೆನುತ | ಭಾಮೆಯಹ ಗಿರಿಜೆಯಿಂದೊಡಗೂಡಿ ಹರುಷದಿಂ | ಕಾಮಾಂತಕಂ ಕುಳಿತನಧಿಕ ವೈಭವದಿಂದಲಾ ಮಹಾಗಿರಿಯ ಶಿರದೀ || ೧ ||

## ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಹರನು ಸಭೆಯೊಳಗಿರಲು ಪ್ರಮಥರು | ಹರುಷದಿಂ ಪಾಡಿದರು ಕೇಳ್ಳೈ || ಗಿರಿಜೆಯಿರಲೆಡ ಭಾಗದಲಿ | ಕಿರುನಗೆಯವೆರಸೀ || ೧ || ತರಳರಾದಾ ಗಣಪ ಷಣ್ಮುಖ | ರಿರಲು ಯೆಡಬಲ ಭಾಗದಲಿ ಪ್ರಮ || ಥರುಗಳೆಸೆದರು ಧರಿಸಿ ಶೂಲವ | ನೊರೆವೆ ನಿನಗೇ || ೨ || ತಲೆಯ ಗಂಗೆಯ ಚೆಲುವು ಚಂದ್ರನ | ಥಳ ಥಳಿಪ ಸಿತಕಿರಣಶೋಭೆಯೂ || ಇಳೆಯೊಳಗ್ಗದ ವದನಕಮಲದ | ಚೆಲುವು ಬಳಿಕಾ || ೩ || ರುಂಡಮಾಲೆಯೊಳತಿಭಯಂಕರ | ನೆಂದೆನಿಸಿ ವಿಷವಿರುವ ಹಾವನು || ಮುಂದಲೆಗೆ ಸುತ್ತಿರಲು ಭೀಕರ | ನೆಂದೆನಿಸುತಾ || ೪ || ಪರಿಕಿಸಲು ಭೀಕರವ ಕಾಂತಿಯ | ಬೆರಸಿ ನೋಡಿದರೆಂತು ಕಾಂಬುದೊ || ಅರಿಯಬೇಕೆಂಬಂತೆ ಶಂಕರ | ನಿರಲು ಕೇಳ್ಳೈ || ೫ || ತಿರುಗಿ ನಸುನಗೆನೆರಸಿ ದಂತದ |

ವರರುಚಿರ ಮೊರ ಸೂಸೆ ಗಿರಿಜೆಯು || ಸಿರಿಮುಖವ ನೋಡುತ್ತಲಾ ಸ್ಮರ | ಹರನು ನುಡಿದಾ || ೬ ||

ರಾಗ ಕೇತಾರಗೌಳ, ಅಷ್ಟತಾಳ.

ಚಂದಿರನಾ ಸೊಬ | ಗಿಂದಲೆಸೆವ ಮದ | ಸಿಂಧುರಗಮನೆ ನಾನೂ || ಮುಂದೆ ಪೇಳುವ ಮಾತ | ನೊಂದ ಕೇಳೆಲೆ ವರ | ಸುಂದರಿಮಣಿಯೆ ಸೀನೂ || ೧ || ವಸವಂತನೆಂಬವ | ಬಿಸಜಮುಖಿಯೆ ಬಂದು | ಪಸರಿಸಿದನು ಶೋಕವಾ || ನಸುನಗುವಂತಿಹ | ಕುಸುಮಗಳಿರವ ನೋ | ಡಸಿತಾಲಕಿಯೆ ಮುದದೀ || ೨ || ಎಂದ ಮಾತಿಗೆ ಗಿರಿ | ನಂದನೆ ನುಡಿದಳಾ | ನಂದವ ಮೊರ ಸೂಸುತಾ || ಕಂದುಗೊರಳ ನೋಡು | ಬಂದ ಮಾರುತ ಸುಮ | ಗಂಧವ ಮೋಹಿಸುತಾ || ೩ || ಜಲಕೇಳಿಯಾಡಲು | ಚೆಲುವಾದ ಸಮಯ ನಿ | ನ್ನೊಲವ ಪೇಳುವುದೆರೆಯಾ || ಬಳಲಿಕೆಗೋಸುಗ | ಜಲದೊಳಗಾಡುವ | ಬಲವಂತ ಯೋಳೆನಲೂ || ೪ || ಶಂಕರನೆಂದ ಕೇಳ್ | ಪಂಕಜಾಂಬಕಿ ನಿನ್ನ | ಅಂಕಿತವರಿಯಲೆಂದೂ || ಶಂಕಿಸಿ ಕೇಳ್ದೆ ನಿ | ನ್ನಂಕಿತವಿನಿತಿರೆ | ಬಿಂಕ ಪೋಪುದೆಂದೂ || ೫ || ಪೊರಟೆನೆಂದೇಳಲು | ಪರಿವಾರದವರೆಲ್ಲ | ತೆರಳಲು ಹರುಷದಲೀ || ಗಿರಿಜೆಯ ಗೂಡಿ ಶಂ | ಕರ ಪೊರಟನು ತಾನು | ಸರಸಿಯೆಡೆಗೆ ಗಿರಿಯಿಳಿದೂ || ೬ ||

ಕಂದ.

ನಡೆದರ್ ಮುಂದೆಗೆ ನಾನಾ | ಬೆಡಗಂ ನೋಡುತ ಪರಮಾನಂದಂ ಮನಮಂ || ಬಿಡದಿಯ ಮಾಡಿರೆ ನೋಡಿದ | ರೆಡಭಾಗದೊಳೊಂದು ಕೊಳಂ ಕಾಣೆನೆ ಸೊಬಗಿಂ || ೧ ||

ವಾರ್ಧಿಕಷಟ್ಪದಿ.

ತುಂಬಿ ನೀರಿಹ ಕೊಳದ ಕಮಲಂಗಳಂ ಕಂಡು | ತುಂಬಿಗಳ್ ಬಂದು ಝೇಂಕರಿಸಿ ಝೇಂಗುಡಿದು ಮದ | ತುಂಬಿ ತಂಬೆಲರ ಜೆಂಬಲವಾಗಿ ಗೂಡಿ ನೆಡೆಗೋಡಲೆಂದೂ || ಮುಂಬರಿಯೆ ಮಧುಪಾನ ಮತ್ತದಿಂದಲೆ ಮನಂ | ಮುಂಬರಿಯದಿರೆ ದಾರಿ ಮಧುಪಾನದಿರವ ತಾ | ಮುಂಬರಿದು ಶಂಭು ತಾನಂಬುಜಾಂಬಕಿ ಗಿರಿಜೆಗಿಂಬಾಗಿ ತೋರಿ ಬಳಿಕಿಂತೆದನೂ || ೧ ||

ರಾಗ ಸಾಂಗತ್ಯ, ರೂಪಕತಾಳ.

ಸರಸೀಜಾಂಬಕಿ ನೋಡು | ಸರಸೀಯ ಬೆಡಗನು | ಹರುಷಾವ ಮ
ನಕೆ ಬೀರುವುದೂ || ತರುಣಿಯುರಸು ಪೋಲು | ತಿರುವುದೆಂತೆಂಬುದ | ನರು
ಹೂವೆನೆದಸು ಕೇಳರಸೀ || ೧ || ಕಮಲವೆ ಮುಖವಾಗಿ | ವಿಮಲ ಹಂಸವೆ
ಕುಚ | ರಮಣೀಯ ತೆರೆಯೆ ತ್ರಿವಳಿಯೂ || ಕಮನೀಯತರವಾದ | ಅಮಲ
ಹುಲ್ಲಿನ ತೀರ | ಅಮುಮ ಪಕ್ಷಿಯ ಸೀರೆಯ್ಕೊಸೇ || ೨ || ಮೆರೆವ ಲೋಚನಕೆ
ವಿಷಾ | ನರುಣಾಧರಕೆ ನೋಡು | ಮೆರೆವ ಪವಳಬಳ್ಳಿಯಿರಲೂ || ತರುಣಿಯು
ರಿಗೆ ಸರಿ | ಯಿರುವುದೆಂದುಸುರಾಲು | ಬರುವುದೆ ಅಪವಾದ ಹೇಳೂ || ೩ ||
ವರೆದಳಾಗಲೆ ಗಿರಿ | ವರಜಾತೆ ಕರುಣಾಸಾ | ಗರ ನಿನ್ನ ಸರಸಾದ ಪರಿಯೂ ||
ಇರಲಿ ತಾಪವ ಪರಿ | ಹರಿಸಲೋಸುಗ ನಾವು | ವಿರಚಿಸಬೇಕು ಮಜ್ಜನವಾ ||
|| ೪ || ಎಸಲಾಗ ಶಂಕರ | ಸನುಮತವೇ ತನ್ನೊ | ಳನುವಾನ ಜೇಡ ಮಜ್ಜ
ನಕೇ || ಮನಪೂಲಿವಿಳಿದೆನು | ವನಜಾಂಬಕಿಯೆ ನೀನು | ಘನಜೇಗ ಬಾರೆಂ
ದನು ಭವಾ || ೫ ||

ಭಾಮಿನಿಷಟ್ಪದಿ.

ರಮಣನಾಡಿದ ನುಡಿಯ ಕೇಳ್ದಾ | ಸುಮನಸಾರ್ಚಿತೆ ಬಂದು ನಿಂದಿರ |
ಲಮಿತಪರುಷವಿ ಪ್ಪೆದಡವಿ ಕೈಪಿಡಿದು ಸರಸಿಯಲೀ || ಕಮಲನಾಭನ ಗೆಳೆಯ
ತಾನಾ | ಗಮಲಜಲದೊಳಗಿಳಿದು ಮಡದಿಯ | ವಿಮಲವದನವ ಚುಂಬಿಸುತ
ಜಲಕ್ರೀಡೆಯಾಡಿದನೂ || ೧ ||

ರಾಗ ಸುರುಟ, ಏಕತಾಳ.

ಆಡಿದ ಶಂಕರನೂ | ನಲಿನಲಿ | ದಾಡಿದ ಪರಶಿವನೂ || ಪಲ್ಲ || ಆಡಿದ
ಗಿರಿಜೆಯ | ಗೂಡುತ ಪರಶಿವ || ನೋಡು ಚಲವೀ | ಡಾಡುತ ಮುದದಲೀ ||
ಆಡಿದ || ೧ || ಮುಳುಗುತಲೊನ್ಮೆಗೆ | ಘಳಿಲನೆದ್ದು ಬಂ || ದೆಳೆದು ಕೆಡಹಿ
ನಲಿ | ನಲಿದಾಡುತಲೀ || ಆಡಿದ || ೨ || ಸಿಕ್ಕದೆ ನೀನೆಂ | ದುಕ್ಕುವ ಹರು
ಷದಿ || ನಕ್ಕುನಕ್ಕು ಕುಣಿ | ದಕ್ಕರದಿಂದಲಿ || ೩ || ಸೋತೆನು ಸೋತೆನು |
ಧಾತುಗೆಡಿಸಿ ಸೀ || ಕಾತುರಗೊಳಿಸದೆ | ಪ್ರೀತಿಯಲೀ ಬಿಡು || ಆಡಿದ ಶಂಕ
ರನೂ || ೪ ||

ವಾರ್ಧಿಕಷಟ್ಪದಿ.

ಈ ತೆರದೊಳಾಡಿ ಜಲಕೇಳಿಯಂ ಬಳಿಕ ದಢ | ಕಾತುರದೊಳ್ಳಿದಿ ವಸ ನಾಂಬರಗಳಂ ಮುದದೊ | ಳಾತುಕೊಂಡಾಗ ನಿಜಗೇಹಕ್ಕೈದಲ್ ಸಿದ್ಧರಾಗೆ ಗಿರಿಸುತೆ ನುಡಿದಳೂ || ಪ್ರೀತ ಕೇಳ್ ಸುಮುಕೋರಕಂಗಳಂ ಕ್ಕೊಯ್ದು ನಾ | ಸೀತತೊ ಕ್ಷಣಕೆ ಬಹೆನೆಂದು ಪೋದಳ್ ಲೋಕ | ನಾಥನಲ್ಲಿಯೆ ಕುಳಿತನೆಲೆ ರಾಮ ಲಾಲಿಸ್ಸು ಮುಂದಾದ ಕಥನಮಂ ವಿವರಿಸುವೆನೂ || ೧ ||

ಭಾಮಿನಿಷಟ್ಪದಿ.

ಮಂಗಳೆಯು ಬೇಕಾದ ಸುಮುಗಳ | ಸಂಗದಲಿ ಧರಿಸುತ್ತ ಬಂದಳ | ಸಂಗಬಾರಯ ಬಳಿಗೆ ಮೆಲ್ಲನೆ ಕಾಣದಂದದಲೀ || ಅಂಗ ಮರೆಯುಸಿಕೊಂಡು ಬಂದಾ | ಭೃಂಗಕುಂತಳೆ ತನ್ನ ಕೈಯ್ಯಲಿ | ಕಂಗಳನು ಮುಚ್ಚಿದಳು ಪರಿ ಹಾಸದಲಿ ಪರಶಿವನಾ || ೧ ||

ರಾಗ ಸಾರಂಗ, ಅಷ್ಟತಾಳ.

(ದಾಟಿ:— ಲಾಲಿಸ್ಸೆ ನಿರ್ಜರೇಂದ್ರಾ | ಜಯಂತ ಸು | ಶೀಲ ಕೃಪಾಬ್ಧಿಚಂದ್ರಾ ||)

ರಾಮ ಕೇಳ್ ಕಥೆಯ ಸೀನೂ | ಪರಿಹಾಸ | ದಾ ಮಹಾಮಹಿಮೆಯ ನೂ || ಪ್ರೇಮದಿ ಮಂಗಳೆ | ಕಾಮವೈರಿಯ ಕಣ್ಣ | ತಾ ಮುಚ್ಚಲಾದುದ | ಸೇಮದಿಂದೊರೆಯುವೇ || ಪಲ್ಲ || ಧರೆಗೆ ಕಕ್ಕಸವಾದುದು | ಮುಚ್ಚಲು ಕಣ್ಣ | ಭರಿತ ಕತ್ತಲೆಯಾದುದೂ || ಅರಸಲು ಬೆಳಕಿಲ್ಲ | ಅರರೆ ಜೋವಿಗ ವೆಂದು | ಕರಕರಿಸಿದುವು ಮೂ | ಧರೆಯ ಜೀವಿಗಳೂ || ೧ || ನಡೆಯಲಾರದೆ ಜನರು | ಕತ್ತಲೆಯೊಳು | ಕಡು ದುಃಖಭಾಜನರೂ || ಹುಡುಕಿ ಹುತಾಶನ | ನೆಡೆಯನೆಲ್ಲೆಲ್ಲಿಯು | ಪೊಡವಿಯೊಳ್ ಕಾಣದೆ | ಕಡು ದುಃಖದಿಂದಲೀ ||೨|| ದಾರಿಗಾಣದೆ ಶಿವನೆ | ಸಲಹೊ ನಮ್ಮ | ಭೂರಿಮಹಿಮ ಭವನೇ || ತೋರಿಸಿ ದುಃಖದಾ | ವಾರಿಧಿಯಾ ಕಡೆ | ಸೇರಿಸಿ ಪೊರೆಯೊ ಮಾ | ರಾರಿಯೆ ಮೋದದೀ || ೩ || ಸುರಪಾಲ ಬಸವಳಿದಾ | ಸಾರಸಭವ | ಪಿರಿದಾದ ಕಳವಳದಾ || ಪರಿಯ ಕಾಣದೆ ಸಿರಿ | ಯೆರೆಯನ ಕೇಳಲು | ವರಸುಧಾ | ಶರಧಿಗೆ | ಶಿರ ಬಾಗಿ ನಮಿಸಿದಾ || ೪ ||

ರಾಗ ಕೇತಾರಗೌಳ, ಅಷ್ಟತಾಳ.

(ದಾಟಿ:—ಭಳಿರೆ ಮೆಚ್ಚಿದೆ ಕೇಳು ಬಳಕುಲಮಣಿಯೇ ॥)

ಪೊರೆ ದಯದಿಂದ ಶ್ರೀ | ಯೆರೆಯ ಗೋವಿಂದ | ಕರುಣಾಸಾಗರ ದಯ | ಬಿರಿಸೊ ಮಹಾನಂದಾ ॥ ಪೊರೆ ದಯ ॥ ಪಲ್ಲ ॥ ಕತ್ತಲೆ ಲೋಕವ | ಮುತ್ತಿ ಮುಂಗೆಡಿಸಿ ನ | ಮ್ಮುತ್ತಮ ಕಜ್ಜವ | ಸೊತ್ತಾಯಿಬಿ ನಿಲಿ | ಸುತ್ತ ಸಮ್ಮೆಲ್ಲರನೂ ॥ ಬಹುಪೀಡಿ | ಸುತ್ತಲೆ ಕಣ್ಣೀರನೂ | ಧಾರುಣಿಗಿಳಿ | ಸುತ್ತಲೆ ಕ್ಷಾವರನೂ | ಕಾಣದೆ ಬಂದೆ | ವಿತ್ತಲೆ ದೇವರನೂ ॥ ಪೊರೆ ॥ ೧ ॥ ನಿನ್ನವರೆಂಬುವ | ದಿಸ್ನು ಬಾರದೆ ಮಸ | ಉನ್ನತೋನ್ನತ ಸುರ | ಸನ್ನುತ ಪದಯುಗ | ವನ್ನು ತೋರಿಸಲೊಲ್ಲದೇ ॥ ಪೋಗುವೆ ಯೆಲ್ಲಿ | ಗಿನ್ನು ನೀ ಗತಿ ಯಲ್ಲದೇ | ಪೋದರೆ ಧೈರ್ಯ | ಕಿನ್ನು ತೋರೆಸೆಯೆಲ್ಲಿದೇ | ನಮ್ಮಯ ಬಾಳ್ವೆ | ಯಿನ್ನು ನಿನ್ನೆಡೆಯಲ್ಲದೇ ॥ ಪೊರೆ ॥ ೨ ॥ ಅಂಬುಜಮಿತ್ರ ಮೇ | ಣಂಬುಜವೈರಿಗ | ಳೆಂಬವರೆಲ್ಲ ಹೇ | ಳಂಬುಜನಯನೀ | ನಂಬಿ ಬಂದೆವು ಪಾದವಾ ॥ ಸಲಹೊ ನಮ್ಮ | ಕಂಬುಗೊರಳ ಮಾಧವಾ | ನಿನ್ನ ದಯಾ ಬೇ | ಕೆಂಬ ಮನಕೆ ನೋಡವಾ | ತೋರಿಸು ಬೇಗ | ಜಂಭವೈರಿಯ ಕ್ಷಾದವಾ ॥ ಪೊರೆ ದಯದಿಂದ ॥ ೩ ॥

ಭಾಮಿನಿಷಟ್ಪದಿ.

ಸರಸಿಜಾಸನನಿಂತು ನುತಿಸಲು | ಸರಸಿಜಾಂಬಕ ತಿಳಿದು ಕಮಲಜ | ಗರುಹಿದನು ಗಂಭೀರವಾದ ನಭೋನಿನಾದದಲೀ ॥ ಹರನ ಕಂಗಳ ಮುಚ್ಚಿದಳು ಶಂ | ಕರಿಯು ಕೇಳದರಿಂದ ತಿಮಿರವು | ಧರೆಗೆ ಹಬ್ಬಿದೆ ಶಂಕರನು ಪಾಲಿಸುವ ನಡೆಯೆಂದಾ ॥ ೧ ॥

ರಾಗ ಮಧುಮಾಧವಿ, ತ್ರಿವುಡೆತಾಳ.

ಹರಿಯ ನುಡಿಯನು ಕೇಳಿ ಕಮಲಜ | ತೆರಳಿದನು ನಿಶಿಯೊಳಗೆ ಮೆಲ್ಲನೆ ॥ ಪರಶಿವನ ಪದಕಮಲದಲಿ ಮನ | ವಿರಿಸಿ ಜಯಜಯವೆಂದು ನುತಿಸಿದ ಕರುಣನಿಧಿಯಾ ॥ ೧ ॥ ಗಂಗೆಯನು ಶಿರದೊಳಗೆ ಧರಿಸಿದ | ತುಂಗಮಹಿಮ ಮಹೇಶ ಶಂಕರ ॥ ಅಂಗಜಾಂತಕ ನಾಶರಹಿತ ಘ | ಬಂಗಧರ ಸಲಹೆಂದು ತಾ ಪಿಡಿದಂಜಲಿಯಲೀ ॥ ೨ ॥ ಕುಸುಮಶರಪುರಮಥನ ಸುಮನಸ | ವಿಸರ

ವಂದಿತ ರುಂಡಮಾಲೆಯೊ || ಕೆಸೆವ ವರದ ಪಿನಾಕಪಾಣಿಯೆ | ದೆಸೆಯು ಗೆಡಿಸುವೆ ಯೇಕೆ ತಿಮಿರದೊಳುಸುರು ದೇವಾ || ೩ || ಶರಣಜನಸುರಧೇನು ಭಕ್ತರ | ಮೊರೆಗೆ ಕಿವಿಗೊಡದಿರಲು ನಮ್ಮನು || ಪೊರೆಯುವವರಾರೆಲೆ ಜಗನ್ಮಯ | ಪರಿಹರಿಸಿ ಕತ್ತಲೆಯ ಲೋಕವ ಸಲಹೊ ದೇವಾ || ೪ || ಕಮಲನಾಭನ ನುತಿಸಲರುಹಿದ | ನಮಲ ಶಿವಪಾದವನು ಮರೆಹೊಗ || ಅಮಿತಗುಣನಿಧಿ ಲೋಕದೊಳಗಿಹ | ತಿಮಿರವನು ಪರಿಹರಿಸಿ ಕಾಯುವನೆನುತ ನಮಗೇ || ೫ ||

ಭಾಮಿನಿಷಟ್ಪದಿ.

ಬಂದ ಪರಿಭವವನ್ನು ಕಳೆ ಗೋ | ವಿಂದಸಖ ಸಚರಾಚರಾತ್ಮಕ | ಮುಂದೆ ನೀ ಗತಿಯೆಂದು ಕಮಲಜ ಭಜಿಸೆ ಶಂಕರನಾ || ಮಂದಹಾಸವ ಬೀರಿ ಗಿರಿಜೆಯೊ | ಳೆಂದ ಬಿಡುಬಿಡು ಕರವ ಲೋಕವ | ಕಂದಿಸದೆ ಚಿಂತೆಯೊಳಗದ್ಭುತವಾಯ್ತು ನೋಡೆಂದಾ || ೧ ||

ಕಂದ.

ಅಗಜೆಯು ಬೇಗನೆ ಕರಮಂ | ತೆಗೆದಳ್ ತಪ್ಪೆಸಗಿದೆ ತಾನೆಂದೆನುತಾಗಳ್ || ಜಗದೊಳ್ ಮೂಡಿತು ಬೆಳಕೇ | ನುಗಿಸೆಂ ರಾಮನೆ ಕೇಳ್ ಬಳಿಕೊಂದಚ್ಚರಿಯಂ || ೧ ||

ವಾರ್ಧಿಕಷಟ್ಪದಿ.

ಅಡಗೆ ಕತ್ತಲೆ ತಿಳಿದು ಕಮಲಜನು ಸಂತೋಷ | ದೊಡಲಭಾರದಿ ನಡೆದ ಲೋಕದೊಳಗಾನಂದ | ಮಡಸಿದುದು ಕತ್ತಲೆಯು ಬೆರದೊಂದು ಶಿಶುವಾಗಿ ಶಿವನ ಪದದೊಳ್ ರೋದಿಸೇ || ಮೃಡನು ತಾನಾ ಶಿಶುವ ಪಿಡಿದಿತ್ತು ಶಂಕರಿಗೆ | ನುಡಿದನೆಲೆ ದೇವಿ ಕೇಳ್ ಶಿಶುವಿದಂ ಪಡೆದವರ್ | ಪೊಡವಿಯೊಳ್ ನಾನ್ಯೆಸೆ ಬಾಳಲಿವನಂಧಕಾಸುರನಾಗಲೆಂದರುಹಿದಾ || ೧ ||

ದ್ವಿಪದಿ.

ಅಂಧಕಾಸುರನ ಪಿಡಿದಾಗ ಶಂಕರನೂ | ಮುಂದಕಾಲೋಚಿಸಿದನರಿಭಯಂಕರನೂ || ೧ || ಆರಿಗೀಯುವೆನಿವನ ಸಾಕುವರೆ ಮುಂದೇ | ಭೂರಿಬಲಯುತರಾರೊ ಲೋಕದೊಳಗೆಂದೇ || ೨ || ಚಿಂತಿಸಲು ಗಿರಿಸುತೆಯು ಪದಯುಗಕೆ ನಮಿಸೀ | ಸಂತಸದೊಳರುಹಿದಳು ಮುಗುಳುನಗೆನೆರಸೀ || ೩ ||

ನುತಿಸುತಿಹ ತವ ಪದವ ವರ ಹಿರಣ್ಯಾಕ್ಷಾ | ಸುತನ ಬೇಡಲು ನಿಮ್ಮನೆಲೆ ಜಗದ್ರಕ್ಷಾ || ೪ || ಎನೆ ಕೇಳಿ ತಪಗೈವ ದೈತ್ಯನೆಡೆಗೆ ಭವಾ | ಸನುಮತದಿ ಶಿಶುವ ಕೊಂಡ್ಯೊದಾಗ ಶಿರವಾ || ೫ || ಪಿಡಿದೆತ್ತಿ ಮೆಚ್ಚಿದೆನು ವೀರ ಮನದಿರವಾ | ನುಡಿಯೊ ಕೊಡುವೆನು ನಿನಗೆ ಬೇಕಾದ ವರವಾ || ೬ ||

## ಭೋಗಷಟ್ಪದಿ.

ಎನಲು ಕೇಳಿ ಕಣ್ಣ ತೆರೆದು | ದನುಜ ಶಿವನ ಪಾದಯುಗಕೆ | ಮಣಿದು ಕೇಳ್ದ ಮೂರು ಲೋಕವನ್ನು ಜೈಸುವಾ || ಘನಪರಾಕ್ರಮದಲಿ ವೀರ | ನೆನಿಸಿದೊಬ್ಬ ಮಗನ ಕೊಡುವು | ದೆನಲು ನುಡಿದ ಶೂಲಿ ಸಲುಗೆಯಿಂದ ದೈತ್ಯಗೇ || ೧ ||

## ನಿಧಾನಷಟ್ಪದಿ.

(ದಾಟಿ: — ಆಡಪೋಗುವಾ । ಬಾರೊ ರಂಗ । ಆಡಪೋಗುವಾ ॥)

ಇಳೆಯ ವೀರ | ನೀನು ಬಹಳ | ಬಳಲಿಹೋದೆಯಾ || ಪಲ್ಲ || ಸುತನಿಗಾಗಿ | ಸತತ ನೀನು | ತಪವ ಗೈದೆಯಾ || ಅತುಲಭಕುತಿ | ಯತಿವಿಕಾಸ | ವನ್ನು ಕ್ಯಾದೆಯಾ || ೧ || ಪಿಡಿಯೊ ಮಗನ | ಕಡುಗಲಿಯನು | ಪೊಡವಿಯೆಲ್ಲವಾ || ನಡುಗಿಸುವನು | ನುಡಿಯ ಕೇಳು | ಕಡು ಪರಾಕ್ರಮಿಾ || ೨ || ವೀರನಾಗಿ | ಸುರರನೆಲ್ಲ | ಗಾರುಗೆಡಿಸುವಾ || ಮೂರು ಜಗದ | ವೀರರನ್ನು | ಸೂರೆಮಾಡುವಾ || ೩ || ಪೋಗು ಮನೆಗೆ । ಬೇಗ ನಿನ್ನ | ನಾಗವೇಣಿಗೇ || ಕೂಗಿ ಹೇಳು | ಜೋಗುಳವನು | ಹಾಡಿ ತೂಗಲೀ || ೪ ||

## ವಾರ್ಧಿಕಷಟ್ಪದಿ.

ಅಂಧಕಾಸುರನೆಂಬ ನಾಮವಿತ್ತಿಹೆನಿವಗೆ | ಮುಂದೆ ನೀ ಸಲಹೆಂದು ಕರುಣದಿಂದಾ ಶಿಶುವ | ನಂದು ದೈತ್ಯನ ವಶಕೆ ಕೊಟ್ಟನಾಗಲೆ ಪೇಳಲೇನ್ ಲೋಕ ತಲ್ಲಣಿಸಿತೂ || ತಂದು ಶೋಣಿತಸಗರಿಯಲ್ಲಿ ಸಾಕಿದ ರಿತಿಯ | ನಂದನನು ಮೂಲೋಕಮಂ ಗೆಲುವ ವಿಜಯಸಿರಿ | ಚಂದಿರನ ರಾಹುವನು ಚೆಳೆಯುತಿರ್ದಾ ಬಾಲನಧಿಕ ವಿಸ್ಮಯದಿಂದಲೀ || ೧ ||

ರಾಗ ಕಾಂಬೋಧಿ, ಅಷ್ಟತಾಳ.

(ದಾಟಿ:—ಲಾಲಿಸಿ ಕೇಳಿನ್ನ ಸೊಲ್ಲಾ । ಮನ । ದಾಲೋಚನೆಯ ಪೇಳ್ವೆನೆಲ್ಲಾ ॥)

ಕೇಳಿದೆಯಾ ರಾಮ ನೀನೂ | ಬಾಲ | ಗೇಳಿಗೆಯನು ಪೇಳಲೇನೂ || ಕಾಲನೆಂಬನು ರೂಪ | ತಾಳಿ ಬಂದಿರುವಂತೆ | ಬಾಲನತಿಬಲದಾಳು ಮಲ್ಲರ | ಪಾಲನಾದನು ತೋಳಬಲದಲೀ || ೧ || ವೀರನು ಭುಜಬಲದೊಳಗೇ | ಮದ | ವಾರಣವನು ಪಿಡಿದೆಳೆಗೇ || ಘೋರನೆ ಕೆಡಹುವ | ವಿಾರಿದ ಬಲವಂತ | ಮೂರು ಲೋಕದಿ ದುರುಳನಿಂಗಿದಿ | ರಾರು ಸುರನರವಾರಜಿತನಿವ || ೨ || ಗಣನೆಯಿಲ್ಲದ ದೈತ್ಯ ಬಲದಿ | ವೀರ | ಗೆಣೆಯಾದವರ ಕಾಣೆ ಛಲದೀ || ರಣದಲಿ ಹಿಮ್ಮೆಟ್ಟಿ ಮಣಿವುದನರಿಯನು | ರಣದಿ ಕಾಪಟಮಲ್ಲಭಯಮೆಂದಿಸಿತರಿಯ ಕಣನೊಳಗೆ ದೈತ್ಯನು || ೩ ||

ಭಾಮಿನಿಷಟ್ಪದಿ.

ಅಂಧಕಾಸುರ ಬೆಳೆಯುತಿರೆ ಕೇ | ಳಿಂದಿರೇಶನು ರೂಪವೆರಡರೊ | ಳಂದು ಕೊಲಲು ಹಿರಣ್ಯನಯನ ಹಿರಣ್ಯಕಶಿಪುಗಳಾ || ಮುಂದೆ ರಕ್ಕಸರೆಲ್ಲ ಯೋಚನೆ | ಯಿಂದ ಪಟ್ಟವಗಟ್ಟಿದರು ಕೇ | ಳಂಧಕಾಸುರನಿಂಗೆ ಶೋಣಿತ ನಗರಿಯಲಿ ಬಳಿಕಾ || ೧ ||

ವಾರ್ಧಿಕಷಟ್ಪದಿ.

ರಾಮ ಕೇಳೊಂದು ದಿನ ಬಲನಮುಚಿಜಂಭನು | ದ್ದಾಮಬಲ ಶುಂಭ ಬಳಿಕಾ ಸುಬಲ ಪ್ರಬಲರೆಂ | ಬಾ ಮಹಾವೀರ ರಕ್ಕಸರೊಡನೆ ವಂದಿಮಾಗಧರ ಜಯಜಯಘೋಷದೀ || ಹೇಮಪೀಠವನೇರಿ ದೈತ್ಯನೋಲಗದೊಳಿರೆ | ತಾ ಮುರಧ್ವಂಸಿ ಶಂಕರನ ಸಂಕೀರ್ತನೆಯ | ನಾ ಮುನಿಪ ನಾರದಂ ಪಾಡುತೈತಂದನತ್ಯಾನಂದ ಮಾನಸದಲೀ || ೧ ||

ರಾಗ ಕಾಂಬೋಧಿ, ಏಕತಾಳ.

(ದಾಟಿ:—ಯಾದವ ನೀ ಬಾ । ಯದುಕುಲನಂದನ ॥)

ಶಂಕರ ಬಾಬಾ | ಪಂಕಜಲೋಚನ | ಶಂಕೆರಹಿತ ಪ | ರ್ಯಂಕಶಶೇಖ ರನೇ || ಕಿಂಕರರಿಗೆ ಹಿತ | ವಂ ಕೊಡುವನೆ ಜಗ | ದಂಕಿತ ವೈರಿಭ | ಯಂ

ಕರ ದೇವನೇ ‖ ೧ ‖ ಶೂಲಧರನೆ ವನ | ಮಾಲಿಸಬನೆ ಕಂ | ಕಾಳಧರನೆ ಹರನೇ ‖ ಕಾಲಾಂತಕ ಗಿರಿ | ಬಾಲೆಯರಸ ಸುರ | ಪಾಲಕನುತಪದ | ಪಾಲಿಸು ಪಶುಪತೀ ‖ ೨ ‖ ಮಂದರಧರ ಗೋ | ವಿಂದ ರಮೇಶ ಮು | ಕುಂದನೆ ಬಾಬಾ | ಸಿಂಧುಶಯನ ಬಾ ‖ ಚಂದ್ರನ ಮುಖಸಿರಿ | ಯಿಂದ ನಗುತ ಬಾ | ನಂದನಂದನ ದಿತಿ | ನಂದನವೈರಿಯೇ ‖ ೩ ‖ ಭೂಮಿಯ ಭಾರವ | ನೀ ಮಾಣಿಸು ಶ್ರೀ | ಭಾಮೆಯರಸ ಬಾ | ಭೀಮಬಲನೆ ಬಾ ‖ ಕಾಮಜನಕ ಸುರ | ಕಾಮಿತದಾತ ಸ | ಮಾಮಿನಮಾಮಿ ಸು | ತಾಮರಸಾಂಬಕ ‖ ೪ ‖

ರಾಗ ಕೇತಾರಗೌಳ, ಅಷ್ಟತಾಳ.

ಕರದಿ ವೀಣೆಯ ನುತಿ | ಸುತ ಮುನಿನಾರದ | ಬರುತಿಹನೆಂಬುದನೂ ‖ ಅರಿತು ದಾನವಕುಲ | ತಿಲಕ ಸಾಷ್ಟಾಂಗದಿಂ | ದೆರಗಲು ಮುನಿನಾಥನೂ ‖ ‖ ೧ ‖ ಮೂರು ಲೋಕದ ಧುರ | ಧೀರ ಯೇಳೆನುತಲಿ | ನಾರದನವನ ಮಸ್ತಕವಾ ‖ ಧಾರುಣಿಯಿಂದೆತ್ತಿ | ಹರಸಲು ದಾನವ | ನೇರಿಸಿ ವಿಷ್ಟರವಾ ‖ ‖ ೨ ‖ ದಯಮಾಡಿ ಅರುಹ | ಬೇಕೆಲ್ಲಿಂದ ಬಂದಿರಿ | ನಯದಿಂದ ಬೇಡುವೆನೂ ‖ ಭಯನಿವಾರಣ ಬಂದ | ಕಾರ್ಯವೇನೆನಲೆಂದ | ಸುಯಿದಾನದಿಂದಾತನೂ ‖ ೩ ‖

ರಾಗ ಕಾಪಿ, ಅಷ್ಟತಾಳ.

(ದಾಟಿ:—ಲಾಲಿಸಿ ಕೇಳಿನ್ನ ಮಾತಾ । ದೈತ್ಯ ॥)

ಕೇಳು ದಾನವಕುಲಮೌಳಿ | ನಾನು | ಪೇಳುವುದನು ಮುದ ತಾಳೀ ‖ ಕೇಳು ‖ ಪಲ್ಲ ‖ ಮೂರು ಲೋಕದ ಧೀರ ನೀನೂ | ಆಹಾ | ತೋರೆನು ಎಣೆಯ ನಾನೂ ‖ ವಿಾರಿದ ದೈತ್ಯರ ಧೊರೆಯೂ | ನಿನ್ನ | ಸಾರಯ್ಯ ಪೊಗಳುವ ಕವಿಯೂ ‖ ಕೇಳು ‖ ೧ ‖ ಬಲದ ಮಾತಿರಲಯ್ಯ ನಿನ್ನ | ಗಿಗೊ | ವಲಿಸಿದ ವೈಭವವನ್ನ ‖ ವಲವೈರಿ ಪಡೆಯಲಿಲ್ಲಮವಾ | ತವ | ಬಲವ ಬಣ್ಣಿಸಲಾರೆನಮವಾ ‖ ಕೇಳು ‖ ೨ ‖ ಮಮತೆಯೊಳ್ ನಿನ್ನ ಸಾಕಿರಲೂ | ನೋಡು | ಗಮನಿಸೆ ತಂದೆ ಸತ್ತಿರಲೂ ‖ ನೀ ಮನದೊಳು ನೋಡು ಸರಿಯೇ | ನಾಮ | ದಾ ಮಹಿಮೆಗೆ ಕುಂದು ಧೊರೆಯೇ ‖ ಕೇಳು ‖ ೩ ‖ ತಂದೆಯ ಕೊಂದಿರುವವನು | ಆರು | ಮುಂದೆ ಯೋಚಿಸದಿಹುದೇನೂ ‖ ಮಂದರಧರ

ಕಿಟಿ ಹರಿಯು | ರೂಪ | ದಿಂದ ಕೊಂದಿಹ ಕೇಳು ಪರಿಯಾ || ಕೇಳು || ೪ ||
ಭೂತಲವನು ಹಿರಣ್ಯಾಕ್ಷ | ಒಯ್ಯ | ಲಾತತೂ ಕ್ಷಣ ಕಮಲಾಕ್ಷ || ಘಾತಿ
ಸಿದನು ಕಿಟಿಯಾಗೀ | ಕೇಳು | ವಾತ ಪೇಳುವೆ ನಿನಗಾಗೀ || ಕೇಳು || ೫ ||
ಕೇಳು ಹಿರಣ್ಯಕಶಿಪುವೂ | ತನ್ನ | ಬಾಲನ ಗದರಿಸೆ ರಿಪುವೂ || ತಾಳಿ ರೂಪವ
ನರಹರಿಯಾ | ಬಂದು | ಸೀಳಿದ ದೈತ್ಯರ ಧೊರೆಯಾ || ಕೇಳು || ೬ || ಚಿಕ್ಕವ
ನೀನಿದನರಿಯೇ | ಬಲ್ಲ | ಶುಕ್ರನಿರಲು ಕೇಳು ಸರಿಯೇ || ದುಃಖದ ವಾರ್ತೆಯ
ಬರಿದೇ | ನಿನ್ನೊ | ಳೊಕ್ಕಣಿಸದೆ ಮೌನವಹುದೇ || ಕೇಳು || ೭ ||

ಭಾಮಿನಿಷಟ್ಪದಿ

ಭೂವಲಯದಲಿ ನಾರದನ ನುಡಿ | ಗಾವವನು ಕಿವಿಗೊಡದಿಹನು ಮ
ಹ | ದೇವ ಹರಿ ಕಮಲಜರು ಸೋಲುವರೈಸೆ ದಾನವನೂ || ಸಾವಧಾನದಿ
ಕೇಳ್ ಕೂರಸಿ | ತಾ ವರೆಯ ಹೊರದೆಗೆದು ಕೊಲ್ಲುವೆ | ನಾಹವದೊಳಾ
ಹರಿಯನೆಂದೆನೆ ಮುನಿಪನಿಂತೆಂದಾ || ೧ ||

ವಾರ್ಧಿಕಷಟ್ಪದಿ.

ವೀರ ಕೇಳ್ಕೆ ನಿನ್ನ ಭುಜಬಲಕೆ ಬೆದರಿ ಶ್ರೀ | ನಾರಿಯುರಸನು ತೆರಳಿ
ಕೈಲಾಸಗಿರಿಯೊಳಗೆ | ಮೂರುಕಣ್ಣಿನ ಶಿವನ ಜತೆಯೊಳಿಹನದರಿಂದ ಶಿವನ
ಜೈಸದೆ ಧುರದಲೀ || ನಾರಾಯಣನು ದೊರೆವನಲ್ಲಪ್ಪೆ ಜಯಸಿರಿಯ | ಹಾರ
ಮಂ ಧರಿಸು ಪೋಗುವೆನೆಂದು ದೇವಮುನಿ | ನಾರಸಿಂಹನ ನುತಿಸುತೈದಲಿ
ತ್ತಲು ದುರುಳ ಸೇನಾನಿಯಂ ಕರಸಿದಾ || ೧ ||

ಕಂದ.

ದಳಪತಿ ಶತವಾಯಂ ಬಹು | ಬಲಯುತನೀ ಕಮಲಜಾಂಡಮಂ
ವಾಯುತದಿಂ || ಗೆಲುವಂ ಮನವಿಡೆ ಭೋರನೆ | ಬಳಸೋಲಗಮಂ ಪೊಕ್ಕಿರ
ಗುತಲಿಂತೆಂದಂ || ೧ ||

ರಾಗ ಕೇತಾರಗೌಳ, ಝಂಪೆತಾಳ.

ವಂದಿಸುತ ಪಾದತಲದೀ | ಪೇಳಿದನು | ಸಂದೇಹವೇನು ಮನದೀ ||
ಬಂದುದನು ಕಾಂಬೆ ಮುಂದೂ | ತನಗೆ ನೀ | ನಿಂದಪ್ಪಣೆಯ ಕೊಡಿಂದೂ ||

|| ೧ || ಸುರರ ಮತ್ಸರವೆ ಪೇಳೂ | ಅಲ್ಲದಸೆ | ನರರಹಂಕೃತಿಯೆ ತಾಳೂ ||
ಕರುಣಿಸಪ್ಪಣೆ ಮೋದದೀ | ಶಿರವರಿದು | ಬರುನೆಸ್ಕೆ ಸಂಗ್ರಾಮದೀ || ೨ ||
ನಸುನಗುತ ದೈತೇಯನೂ | ಪೇಳ್ದ ಕೇ | ಳಸಮಬಲ ಮಾತ್ರೊಂದನೂ ||
ಸುಸಿಗಳಹ ಸುರರ ಭಯವೂ | ನಮಗುಂಟೆ | ಉಸುರುವೆನು ನಿನಗೆಲ್ಲವೂ ||
|| ೩ || ಕುಲವೈರಿಯೋರ್ವ ಕೇಳೂ | ಬಾಳಿರಲು | ತಿಳಿಯದಾಡೆಮ್ಮ ಬಾಳೂ ||
ಫಲಬಿಡದ ಮರದ ತೆರದೀ | ಫಲರಹಿತ | ನೆಲಕೆ ಹೊರೆ ಕೇಳು ಮುದದೀ ||
|| ೪ || ಕ್ಷೀರಾಂಬುಧಿಯ ಮಧ್ಯದೀ | ವಾಸಿಸುವ | ನಾರಾಯಣನು ಕೋ
ಪದೀ || ವೀರರಾಗಿಹ ನಮ್ಮಯಾ | ಪಿತೃಗಳಿಗೆ | ತೋರಿದನು ಯಮನಗರಿ
ಯಾ || ೫ ||

### ಭಾಮಿನಿಷಟ್ಪದಿ.

ಹರಿಯು ನಮ್ಮಯ ಭಯದಿ ಗಿರಿಜಾ | ವರನ ಮರೆಹೊಕ್ಕಿರುವನೆಂಬು
ದ | ಪರಮಮುನಿ ನಾರದನು ದಯದಿಂದುಸುರಿ ಪೋಗಿಹನೂ || ಕರಸಿರುವೆ
ನಿದಕಾಗಿ ತಂದೆಯ | ತರಿದವನ ಕೊಲಲಾಗಿ ಮಾರ್ಬಲ | ನೆರಸಿ ರಜತಾಚ
ಲಕೆ ಪೋಪುದು ಹೊಡೆಸು ಭೇರಿಯನೂ || ೧ |

### ವಾರ್ಧಿಕಷಟ್ಪದಿ.

ಶತಮಾಯನಾ ಕ್ಷಣವೆ ಗಜಸೇನೆರಾಹುತರ | ನತಿವೀರರಾದ ರಥಿಕರ
ಕೋಟಿಸಂಖ್ಯೆಯಿಂ | ಮತಿವಂತರಾದ ಶುಂಭಾದಿಸೇನಾನಿಗಳನೊಡಗೊಂಡು
ಖ್ಯಾತಿಯಿಂದಾ || ಜತೆಯ ಗಂಭೀರ ಭೇರೀ ಕಹಳೆಗಳ ಘೋಷ | ದತಿಶಯದಿ
ಪೊರಡುತಿರೆ ಕೇಳಿದಂ ಮುನಿಗಳಿಂ | ಮತಿವಂತನಾಗಿರುವ ಪ್ರಹ್ಲಾದನೆಲ್ಲವಂ
ಯೋಚಿಸಿದನೀ ತೆರದಲೀ || ೧ ||

### ಭಾಮಿನಿಷಟ್ಪದಿ.

ಕೊರಗಿದನು ಮನದೊಳಗೆ ದಾನವ | ರೆರೆಯ ಹರನ ವಿರೋಧದೊಳ
ಗಸು | ತೊರೆವನಕಟಕಟೇಸನೆಂಬೆನು ವಿಧಿಯ ಮಹಿಮೆಯನೂ || ಮುರಿಯ
ಲಪ್ಪದೆ ಪೋಪೆ ನೀತಿಯ | ನರುಹಿ ನೋಡುವೆ ಕಲ್ಲಿನಲಿ ನೀ | ರೆರೆದ ವ್ಪೋ
ಲೆಂದೆನುತ ಯೋಚಿಸಿ ಬಂದನಾಕ್ಷಣದೀ || ೧ ||

ರಾಗ ಸಾಂಗತ್ಯ, ರೂಪಕತಾಳ.

ಬಂದು ಶೋಣಿತಪುರ | ಕಂದು ಶರಣಜನ | ವೃಂದತಿಲಕ ಸಭೆಯೊಳಗೇ || ಪೊಂದಿ ಪಿಠವ ಮದ | ದಿಂದ ಸಂಗರಕಾಗಿ | ನಿಂದ ದೈತ್ಯನ ಕಂಡು ಮನದೀ || ೧ || ಮರುಗಿ ನುಡಿದನಯ್ಯೋ | ಭರಿತಮುದವು ಬಂದು | ದುರುಳರೆಲ್ಲರು ಸೇರಿ ಬರಿದೇ || ಪುರಿದುಂಬಿಸುತ ಖಳ | ರೆರೆಯನ ಕೊಲ್ಲುವ | ರರುಹದೆ ನೀತಿಯನೆನುತಾ || ೨ || ಕಂಡನೀತನ ದೈತ್ಯ | ತಂಡಕೊಡೆಯ ಖತಿ | ಗೊಂಡು ಮಾನಸದೊಳು ನುಡಿದಾ || ಪುಂಡನೀತನು ಮನೆ | ಕೆಂಡವಾಗಿಹ ಬಂದು | ಕಂಡನೇತಕೆ ನಮ್ಮನಿಂದೂ || ೩ || ನೋಡುವೆನೆನುತ ಮಾ | ತಾಡದಿರಲು ದುಃಖ | ಗೂಡಿ ದಾನವಬಲಕೆಲ್ಲಾ || ಕೇಡಹುದಂಬುದ | ಗಾಢದಿ ತಿಳಿದೆಂದ | ಮೂಢದಾನವರೊಡೆಯನಿಗೇ || ೪ ||

ರಾಗ ಬೇಗಡೆ, ಆದಿತಾಳ.

(ದಾಟು:—ಲಾಲಿಸೆಲೆ ಸುರ । ಪಾಲಕನೆ ನುಡಿಯಾ । ನಿನ್ನೆಡೆಗೆ ಬಂದಿಹ ।)

ದಾನವರ ಬಲದಾಸೆ ಪೇಳುವೆನೂ | ಕೇಳು ಬಂದಿಹು | ದೇನೆನುತ ನಾನೆಲ್ಲವರುಹುವೆನೂ || ಪಲ್ಲ || ಹೀನನಾದೆಯ | ದಾನವರ ಕುಲ | ಭಾನು ನೀತಿಯ | ಸೇನಪಿಯೆಯು | ಮಾನನಿಧಿ ನಿನಗೇನನಲಿ ಮದ | ದಾನೆಯಾದೆಯಾ || ದಾನವರ ಬಲ || ಅನುಪಲ್ಲ || ಸಂಗರಕೆ ಪೊರ | ಟಂಗವೇನಿದ | ರಿಂಗಿತವ ಪೇಳೂ | ಕೆಂಗಿಡಿ | ಕಂಗಳಲಿ ಬಲ | ದಂಗವಣೆಯಲಿ | ಬೆಂಗಡೆಯೆ ಕೇಳು | ಮೆರೆದಿರ | ಲಂಗದಲಿ ವರ | ಕಂಗೊಳಿಪ ಪೊ | ನ್ನಂಗದೊಡವುಗಳು | ನೆರೆದೀ | ರಂಗದಲಿ ಸಾ | ರಂಗವೇಣಿ ಮೃ | ದಂಗನಿನದಗಳೂ | ಭೇರಿಯ | ನಂಗದೊಳು ಕೆಲ | ರಂಗದೊಳು ಪಟ | ಹಂಗಳನು ಭಟ | ರಂಗಕ್ಕೈದುಗ | ಳಿಂಗೆ ನೆಲೆಯಿದ | ರಿಂಗಿತವನೊರೇ || ೧ || ಹಂಬಲಿಸುವೆ ನಿ | ಶಂಭುವಿನ ಧುರ | ಕೆಂಬುದನು ಕೇಳೀ | ಸರಿಯು | ಲ್ಲೆಂಬುದೆಲ್ಲವ | ನಂಬುವಂತೆಯೆ | ಮುಂಬರಿದು ಪೇಳೀ | ಪೋಗುವೆ | ನೆಂಬ ಹರುಷವ | ತುಂಬಿ ಮಾನಸ | ಹಂಬಲವ ತಾಳೀ | ಬಂದಿಹೆ | ನಂಬಬೇಡ ಪ್ರ | ಲಂಬ ಬಳಿಕಾ | ಶುಂಭರಿದ ಕೇಳೀ | ಸುಮ್ಮನೆ | ತಂಬೆಲರ ತೆರ | ದಿಂಬಿನಲಿ ಪುರಿ | ದುಂಬಿಸುವರಿಗೊ | ನಂಬದಿರು ನಾ | ನೆಂಬುದನು ಕೇಳ್ | ಶಂಭುವಿಷ್ಣುಗ | ಳೆಂಬವರ ಧುರ | ವೆಂಬುದನು ಮರೇ || ೨ ||

ಭಾಮಿನಿಷಟ್ಪದಿ.

ಕೇಳುತೆಲ್ಲರ ದೈತ್ಯ ವಿಸಾಸೆಯು | ಮೇಲೆ ಕೈಯಾಡಿಸುತ ನುಡಿದನು | ಪೇಳದಿರು ನೀತಿಯನು ಸಾಕಿದ ತಂದೆಯನು ಕೊಲಿಸೀ || ಪೇಳುವರೆ ನೀತಿಯನು ಬಂದೆಯು | ಕಾಳಗದಿ ನೋಡುವೆನು ನಿನ್ನಯ | ಫಾಳಲೋಚನಹರಿಗ ಳಿಬ್ಬರನೆನಲು ಪ್ರಹ್ಲಾದಾ || ೧ ||

ರಾಗ ಕಾಂಬೋಧಿ, ಝಂಪೆತಾಳ.

ಬೇಡ ದಾನವಕುಲಕೆ | ಕೇಡಹುದು ಸಾರದೆನು | ಮೂಢರಿವರೆಲ್ಲಗೊಂದಾಗೀ || ಕೂಡಿ ಮಾಡುವುದೇನು | ಮಾಡದಿರು ಹರಿಹಗೆಯು | ಬೇಡುವೆನು ದನುಜಕುಲತಿಲಕಾ || ೧ || ಹರಿಯು ಸಂಗರದೊಳಗೆ | ತರಿದ ದಾನವರಾರು | ಪರಿಕಿಸೈ ತಮುನಳಿದ ಪರಿಯಾ || ಅರಿಯೆಯಾ ಕ್ಷೀರಸಾ | ಗರವ ಮಥಿಸಿದ ಪರಿಯು | ಮರತೆಯಾ ದಾನವರ ಧೊರೆಯೇ || ೨ || ವರಕಿಟಿಯ ರೂಪದಲಿ | ತರಿದನೊಬ್ಬನ ನೋಡು | ನರಹರಿಯ ರೂಪದಲಿ ಮೊದಲೂ || ತರಿಯಲಿಲ್ಲವೆ ನಮ್ಮ | ದುರುಳಬುದ್ಧಿಯು ಪಿಡಿದ | ಹಿರಿಯರೀರ್ವರನು ಹರಿಹರನೂ || ೩ || ವೈರತನಮೆಸಗಿದರೆ | ದುರುಳ ದಕ್ಷನ ಮುರಿದು | ಗರಳವನು ಕುಡಿದು ಮೆರೆದಿರುವಾ || ಪರಮೇಶನೆಂಬವನು | ಮೆರೆಯನೇ ಗಂಗೆಯನು | ಧರಿಸಿ ಶಿರದೊಳಗೇ || ೪ || ಇನಿತು ಬಲವಂತರಿವ | ರೆನುವುದನು ಮರೆತು ನೀ | ನನುವರಕೆ ಪೊರಟಿಹೆಯು ಭಳಿರೇ || ಜನುಮವಿತ್ತಾಹನ ಪದ | ವನಜವನು ಧ್ಯಾನಿಸದೆ | ಸನುಮತವೆ ಸಂಗ್ರಾಮ ನಿನಗೇ ||೫|| ಹರಿಹರರ ನುತಿಸುತಿರು | ದುರಿತಕೋಟಿಯನು ಪರಿ | ಹರಿಸಿ ಸದ್ಗತಿಯ ಪಡೆಯುವುದೂ || ಥರವಲ್ಲ ಹರಿಹರರೊ | ಳರಿತನವು ಪೇಳಿದೆನು | ದುರುಳತನದಲಿ ಕೆಡುವೆ ನೀನೂ || ೬ ||

ರಾಗ ಮಾರವಿ, ಏಕತಾಳ.

ಕೇಳುತಲಿದನಾ | ಖೂಳನು ಕೋಪವ | ತಾಳದೆ ಹೂಂಕರಿಸೀ || ಪೇಳಲು ನೀತಿಯ | ಕೇಳ್ದನೆ ನಿನ್ನನು | ಖೂಳನೆ ತಿಳಿದಿಹೆನೂ || ೧ || ಕೊಲ್ಲಿಸಿ ತಂದೆಯ | ಮೆಲ್ಲನೆ ಬಂದೆಯು | ಸಿಲ್ಲದೆ ನಮ್ಮೆಡೆಗೇ || ಬಲ್ಲವ ನೀನಿದ | ನೆಲ್ಲವ ಬಲ್ಲೆನು | ನಿಲ್ಲದೆ ನಡೆ ಬೇಗಾ || ೨ || ಹಿಂದಿನವರ ಪರಿ | ಯೆಂದರಿತೆಯು ನೀ |

ಮುಂದಕೆ ಪರಿಕಿಸುವೆ || ಕೊಂದುಕಳೆವೆ ನೋ | ಡಿಂದುಧರನ ಹರಿ | ಯಂ ದಪ ನೋಡುವೆನೂ || ೩ || ಶುಂಭನ ವಿಕ್ರಮ | ಜಂಭನ ಭುಜಬಲ | ಲಂ ಬನ ಸಾಹಸವಾ || ಕುಂಭಿನಿಯಲಿ ಮೇ | ಣಂಬರದೊಳಗಿರ | ದೆಂಬುದ ತಿಳಿ ದಿರುವೇ || ೪ ||

ಭಾಮಿನಿಷಟ್ಪದಿ.

ನೋಡು ಮಾಯಾವಿದ್ಯೆಯಲಿ ಹಗೆ | ಕಾಡ ಸುಡುವವನಾಗಿ ಮೆರೆಯು ವ | ರೂಢಿಯೊಳಗಿದಿರಿಹರೆ ಕೇಳ್ ಶತಮಾಯನೆಂಬವಗೇ || ಗಾಢಗರ್ವಿತ ನೆನ್ನ ಬಲುಹಿಗೆ | ಜೋಡೆನಿಸುವವರಾರು ಪೇಳ್ ಸುಡು | ಗಾಡಿನೊಡೆಯನು ನೃಡನೆ ಪೇಳಿನೆ ಶರಣನಿಂತೆಂದಾ || ೧ ||

ರಾಗ ಸಾರಂಗ, ಅಷ್ಟತಾಳ.

ಬಲ್ಲೆಬಲ್ಲೆ ನಾನು | ಮಲ್ಲನು ನೀನು || ಪಲ್ಲ || ಕೊಲ್ಲುವೆ ಹರಿಹರ | ರೆಲ್ಲರ ಧುರದೊಳು | ಬಲ್ಲಿದ ತವ ಪರಿ | ಯೆಲ್ಲವ ನೋಡುವೆ || ಬಲ್ಲೆ || ಅನು ಪಲ್ಲ || ಫುಲ್ಲಲೋಚನನೊಡನೇ | ಕಾದಲು ಮನ | ದಲ್ಲಿ ಮಾಡಿದೆ ಯೋಚ ನೇ || ಬಲ್ಲೆಯಾ ಸಿರಿ | ವಲ್ಲಭನ ಹಗೆ | ಯಲ್ಲಿ ಬಾಳಿದ | ರೆಲ್ಲಿ ಜಯ ನಿನ | ಗಲ್ಲವೇ ನಾ | ನಿಲ್ಲವೇ || ೧ || ಕಾಲನಂತಕನಲ್ಲವೇ | ಸಾಯುವೆ ಯೇಕೆ | ಬಾಳಲು ಮನವಿಲ್ಲವೇ || ಕಾಳಿಯುರಸನ | ನೀಲಕಂಠನ | ಕಾಳಗಕೆ ನೀ | ಸೆಳೆ ಯುವೆ ಬಸ | ಬಳಿಯುವೇ || ೨ || ಮನಕೆ ಬಂದಂದದಲೀ | ಮಾಳ್ಪುದು ನೀನು | ಮನುಮಥಾರಿಯು ಕೈಯಲೀ || ಘನತರದ ಮದ | ಗರ್ವವಿಳಿಯು ವು | ದನುವರದ ಪರಿ | ಪೇಳಿದೆ ನೀ | ಕೇಳಿದೇ || ಬಲ್ಲೆಬಲ್ಲೆ ನಾನು | ಮ ಲ್ಲನು ನೀನು || ೩ ||

ಭಾಮಿನಿಷಟ್ಪದಿ.

ಶರಣನೀತೆರದಿಂದ ಪೇಳಲು | ದುರುಳ ನಡೆ ಪೋಗೆಂದು ಗರ್ಜಿಸೆ | ತೆರಳಿದನು ಕಡೆಗಾಲ ನಿನಗೆಂದೆನುತ ಗುಣನಿಧಿಯೂ || ಭರಿತಹಂಕೃತಿಯಿಂದ ರಕ್ಕಸ | ಪೊರಟನಾಗಲೆ ವಾದ್ಯಘೋಷದಿ | ಧರಣಿ ಕಂಪಿಸುತಿರಲು ಭಟರು ಗ್ಗಡದ ಬೊಬ್ಬೆಯಲೀ || ೧ ||

ಕಂದ.

ಖಳಬಲವಿಘಾತರದಿಂದಂ | ಕೊಳುಗುಳಕ್ಕೈತಂದಾಗಲೆ ನಿಶಿಯೊಳ್ ರಜ
ತಾ || ಚಲದೆಡೆಯೊಳ್ಬೀಡಂ ತಳೆ | ದಲಸಿಕೆಯಂ ಕಳೆಯಲ್ ಕುಳಿತರ್ ಕೇ
ಳ್ಪರಿಯಂ || ೧ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಇತ್ತ ಖಳಬಲ ವಿಶ್ರಮಿಸುತಿರ | ಲತ್ತ ಸುರನಗರಿಯಲಿ ವಾಸವ | ನಿತ್ತ
ನೋಲಗವನ್ನು ನಿರ್ಜರ | ನೊತ್ತದೊಡನೇ || ೧ || ಬಂದನಾಗಲೆ ಸುರಮು
ನಿಪ ಹರಿ | ಯೆಂದು ನುತಿಸುತ ಕಂಡು ಸುರಪತಿ | ಚಂದದಿಂದಾಸನವನಿತ್ತು
ಪಚರಿಸಿ ಬಳಿಕಾ || ೨ || ಪಾದರಜವನು ತೊಳೆದು ಜಲವನು | ತಾ ಧರಿಸಿ
ಮಕುಟದಲಿ ಕೇಳಿದ | ಹೇ ದಯಾಸಿಧೆ ವಾರ್ತೆಯಿರೆ ಪೇಳ್ | ಮೋದದಿಂ
ದಾ || ೩ || ಲಾಲಿಸೈ ಸುರಪಾಲ ನಿನ್ನಲಿ | ಪೇಳುವೆನು ಪೊಸ ವಾರ್ತೆಯೊಂ
ದಿದೆ | ಖೂಳನಾಗಿಹ ಅಂಧಕನ ನೀ | ಕೇಳಿಬಲ್ಲೈ || ೪ || ತಂದೆಯನು ಹರಿ
ಕೊಂದನೆಂಬುದ | ರಿಂದ ಹಗೆತನ ಹರಿಯೊಡನೆ ಕೇ | ಳಿಂದುಮೌಳಿಯು
ಹರಿಯು ಸಖ | ನೆಂದೆಂಬ ಕತದೀ || ೫ || ಹರನೊಡನೆ ಹಗೆಯೆಣಿಸಿ ಮಾ
ರ್ಬಲ | ವೆರಸಿ ರಜತಾಚಲಕೆ ಪೊರಟಿಹ | ಹರನೊಡನೆ ಕಾದಾಡಿ ಹರಿಯನು |
ಮುರಿಯಲೆಂದೂ || ೬ || ನಿನ್ನ ಮನದೊಲವೇನು ಸುರಬಲ | ವನ್ನು ಕೂ
ಡುತ ಪೋಗು ಬೇಗನೆ | ಸನ್ನುತನೆ ಹರನೊಲವಹುದು ಕೇ | ಳಿನ್ನು ನೀನೂ ||
|| ೭ || ನಡೆಯೆನುತ ತಾ ಗಮಿಸ ಸುರಪತಿ | ಬಿಡದೆ ಸುರಬಲನೆರಹಿ ದೈತ್ಯರ |
ಕೆಡಹಲೋಸುಗ ಭರದಿ ಕುಲಿಶವ | ಪಿಡಿದು ಪೊರಟಾ || ೮ ||

ರಾಗ ತುಜಾವಂತು, ಮಟ್ಟೆತಾಳ

ಧುರಕೆ ಪೊರಟನಾ ಶಚೀಂದ್ರನೂ || ಪಲ್ಲ || ಸುರರ ಬಲವ ಕೂಡಿ
ರಜತ | ಗಿರಿಗೆ ಕಹಳೆ ಭೇರಿನಾದ | ವೆರಸಿ ಘೋಷದಿಂದ ಖಡ್ಗ | ಪರಿಘ
ಮುಸಲ ಮುದ್ಗರಾದಿ | ವಿವಿಧ ಶಸ್ತ್ರಗಳನು ಝುಳಪಿಸೀ | ಕೋಪದಿಂದಲೀ |
ಧರಣಿತಲವ ಬಿಡದೆ ನಡುಗಿಸೀ | ಕೇಳ್ತ ಸುವಿನೊಳಗೆ | ಧರಿಸಿದೊಡವುಗಳನು
ಮುರುಗಿಸೀ || ಧುರಕೆ || ೧ || ಸಲಹಿದೊಡೆಯನೊಡನೆ ಬರಿದೆ | ಕಲಹಗೈದು

ಸಾವ ದುರುಳ | ಖಳರ ಶೋಣಿತವನು ಚೆಲ್ಲಿ | ಬಲಿಯ ಕೊಡಲುಬೇಕು ಮಾರಿ | ಬಳಗಕೆಂದು ಭಟರು ಕೋಪದೀ | ಮುಂದರಿಸಲಾಗ | ನೆಲದ ಧೂಳು ಯೆದ್ದು ಮಾರ್ಗದೀ | ಪಸರಿಸಿತಾಗ | ಜಲಧಿಯಂತೆ ನಡೆವ ಸೈನ್ಯದೀ || ಧುರಕೆ || ೨ ||

ಭಾಮಿನಿಷಟ್ಪದಿ.

ಕಳಕಳೆದು ಗಿರಿ ದುರ್ಗನದಿಗಳ | ಬಲವು ಬಂದಾ ಕ್ಷಣವೆ ರಜತಾ | ಚಲದ ಸನಿಯದಿ ರಕ್ಕಸರು ಬಿಟ್ಟಿರುವ ಪಾಳಯದಾ || ಬಳಿಯೊಳೀ ಸುರಸೇನೆ ನಡೆಯಲು | ಖಳನ ಬೇಹಿನ ಚಾರಕರು ಪದ | ತಲಕೆ ಬಿನ್ನಹವಾಡಿದರು ತಿಳಿದಾಗ ವಹಿಲದಲೀ || ೧ ||

ರಾಗ ಸುರುಟಿ, ಏಕತಾಳ.

ಲಾಲಿಸು ದನುಜೇಶಾ | ಚಾರರು | ಪೇಳ್ವುದು ಬಹುತೋಷಾ || ಚಾಲವಲ್ಲವು ಸುರ | ಜಾಲದೊಡನೆ ಸುರ | ಪಾಲಕನ್ಯೈತಂ | ದೂಳಿಗವನು ನೀ || ಲಾಲಿಸು || ೧ || ಧೊರೆಗಳು ಪೇಳಿರುವಾ | ವಚನದಿ | ಚರಿಸುತಿರಲು ವನವಾ || ಬರುತಿಹ ಸುರಬಲ | ದಿರವನು ಕಂಡೆವು | ಅರರೆ ಜೋದಿಗ ನಾ | ವರಿಯೆವು ಕಾರಣ || ಲಾಲಿಸು || ೨ || ಕಾಡಿನ ನಡುವಿರುವಾ | ಸರಸಿಯ | ನೋಡಲು ಪೋಗಿರುವಾ || ಗೂಢಚರರು ನಾವ್ | ನೋಡಿದೆವಾ ಯೆಡೆ | ಬೀಡ ತಳೆದ ಸುರ | ಗಡಣವ ಮರೆಯಲಿ || ಲಾಲಿಸು || ೩ || ಮಘವನು ಬಲದೊಡನೇ | ಪೇಳಿದ | ಲಗುಬಗೆ ವಚನವನೇ || ಸೊಗಸಿನೊಳದ ಪದ | ಯುಗ ತೊರೆಯು ವೆವಿಂ | ದೊಗುಮಿಗೆ ಹರುಷದಿ | ಹಗೆಗಳ ಪರಿಯನು || ಲಾಲಿಸು || ೪ || ಪಳಿರಿ ಭಟರೆಲ್ಲಾ | ಕುಳಿತಿರೆ | ಕಾಲವು ನಮಗಿಲ್ಲಾ || ಭಾಳವಿಲೋಚನ | ನೂಳಿಗವಿದು ಖಳ | ಜಾಲದೊಡನೆ ಧುರ | ದಾಲಿಸಿಕೆಯ ಬಿಡಿ || ಲಾಲಿಸು || || ೫ || ಎಂದೆನೆ ಸುರನಾಥಾ | ಕೇಳುತ | ಬಂದೊರೆದೆವು ಮಾತಾ || ಮುಂದಿನಪರಿ ಮನ | ಬಂದಂತೆಯೆ ಮಾ | ಡೆಂದೆನುತಾ ಕ್ಷಣ | ವಂದಿಸೆ ಚಾರರು || ಲಾಲಿಸು || ೬ ||

ಭಾಮಿನಿಷಟ್ಪದಿ.

ಕೇಳುತಲಿ ಚಾರಕನ ಮಾತನು | ಖೂಳನಾರ್ಭಟಿಸುತ್ತ ಕೆಂಗಿಡಿ | ಬೀಳುತಿರೆ ಕಂಗಳಲಿ ಕೋಪಾನಲನು ಧಗಧಗಿಸೇ || ಖೂಳ ಮಘವನ ಝಡಿದ

ಖಡ್ಗದಿ | ತಾಳಿಗೆಯ ಕತ್ತರಿಸಿ ನೆತ್ತರ | ಕಾಳಿಯೋಕುಳಿಯಾಡಿಸುವೆನೆಂದೆ ನುತ ಖ್ಯಾತಿಯಲೀ || ೧ ||

ಕಂದ.

ವಾಹಿನಿಪತಿ ಶತಮಾಯಂ | ಗೀ ಸದನವನೆಲ್ಲವನೊರೆಯುವೆನೆನುತಂ ತಾ || ನಾಹವದಿರಮಂ ಯೋಚಿಸಿ | ಸಾಹಸಿಯುವನೊಡನಿಂತೆಂದಂ ಖತಿ ವಿಡಿದುಂ || ೧ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಕೇಳಿದ್ಯೆ ಸೇನಾನಿ ವಾಸವ | ನೂಳಿಗವನೇನೆಂಬೆ ಸನಿಯದಿ | ಪಾಳಯವ ಬಿಟ್ಟಿರುವನೆಂಬುದ | ಕೇಳ್ದೆನಿಂದೂ || ೧ || ಶಂಕರನ ಬೆಂಬಲಕೆ ಪೋಗುವ | ನಂಕಿತವ ನಾ ತಿಳಿದೆ ಸುರರಿಗೆ | ಬಿಂಕವಿನಿತಿರೆ ನಿಲಿಸಬೇಡವೆ | ಶಂಕೆ ತೋರೆ ದೂ || ೨ || ಬಿಟ್ಟಿರಲು ಫಲ ತೋರಿದರು ಕ್ಕೆ | ಗೊಟ್ಟು ಕಾದುವ ಧೈರ್ಯ ಬಾದಿರ | ಲಟ್ಟಹಾಸವ ನಿಲಿಸದಿರೆ ಮುದ | ಬೆಟ್ಟವಹುದೂ || ೩ || ಪೋಗು ನೀ ಬಲಡೊಡನೆ ಬೇಗನೆ | ನಾಗಭೂಷಣನೆಡೆಗೆ ಸುರಬಲ | ಪೋಗದಂದದಿ ತಡೆದು ಖತಿಯಲಿ | ತಾಗು ಸುರರಾ || ೪ || ಬೆಂಬಲಕೆ ಕಳುಹುವೆನು ಕೇಳ್ಕೆ | ಶುಂಭನನು ನಮುಚಿಯನು ಮತ್ತಾ | ಜಂಭ ಬರುವನು ಪೋಗಿ ಸುರರ ಕ | ದಂಬಕೆನಲೂ || ೫ || ಪೊರಟುದಾಗಲೆ ಬಲವು ಸುರಬಲ | ದಿರವನರಸುತ ಖತಿವಿಡಿದು ಶರ | ಪರಿಘ ಪರಶು ಕೃಪಾಣ ಕುಂತವ | ಧರಿಸಿ ಕೇಳ್ಕೆ || ೬ ||

ವಾರ್ಧಿಕಷಟ್ಪದಿ.

ರಾಮ ಕೇಳ್ಕೆ ದಾನವರ ಬಲವು ದಳಪತಿಯ | ನೇಮದಿಂದೈತಂದುದೇ ನೆಂಬೆ ಜಲಧಿ ತಾ | ನೇ ಮುನಿದು ಧರಣಿಗೈತಂದುದೆನೆ ನಿರ್ಜರರ ಬಲವನಿದಿರೊಳ್ಕಂಡುದೂ || ಈ ಮಹಾದ್ಭುತಮಿದೆತ್ತಣದೆಂದು ಕಾಣುತು | ದ್ದಾಮ ಬಲ ಸುರಭಟರ್ ವಿವಿಧಾಯುಧಂಗಳಿಂ | ಗಾ ಮಹಾರಕ್ಕಸರ ಸೇನೆಯಂ ತಾಗಿದರ್ ಗಿರಿ ಗಿರಿಯ ತಾಗಿದಂತೇ || ೧ ||

ರಾಗ ಮಾರವಿ, ಏಕತಾಳ.

ಕಳಕಳದಲಿ ಬಲ | ಮುಳಿಮುಳಿದಾಯುಧ | ಗಳಗಳ ತೋರ್ಗುಡಿಸೀ || ಕೊಲುಕೊಲುತಾಗಲೆ | ಬಲಬಲವಳಿಯಲು | ಕೆಲಕೆಲನೈತಂದೂ || ೧ ||

ಘುಡುಘುಡಿಸುತ ಮುಂ | ದಡಿಯಿಡುತಾಯುಧ | ಝುಡಿಝುಡಿಯುತಲಾಗ || ಕಡಿಕಡಿ ಬಂದರ | ಕೆಡೆಕೆಡೆ ಶೋಣಿತ | ಕುಡಿಕುಡಿ ಯೆಂದೆಸುತಾ || ೨ || ಮತ್ತದ ಖಳಬಲ | ಮುತ್ತಲು ದಿವಿಜರು | ಚಿತ್ತವಿ ಖತಿಯೇರೀ || ಯೆತ್ತಿದ ಕತ್ತಿಯ | ತುತ್ತಿಗೆ ಕತ್ತನು | ಕತ್ತರಿಸಲು ಭರದೀ || ೩ || ಸುರಭಟರೆಸುಗೆಗೆ | ದುರುಳರು ಪಲಬರು | ತೆರಳಲು ಶ್ರೈಮುನಿಗೇ || ತೆರಳುತ ನಮುಚಿಯು | ಧುರಕನುವಾದನು | ಶರಮಳೆಗರೆಯುತಲೀ || ೪ || ಕಂಗೆಡಿಸುತ ಬಲ | ಭಂಗಿಸಿದನು ಸುರ | ರಂಗವನುಜ್ಜ್ವಳಿಸೀ || ಕಂಗರಿಶರದಲಿ | ಮುಂಗಡೆ ಬರುತಿಹ | ರಂಗವ ತರಿದೆಸೆದಾ || ೫ || ಖೂಳನ ಪತಿಯನು | ತಾಳದೆ ಸುರಬಲ | ಕಾಳಗವನು ಕಳೆದೂ || ಗೋಳಿಡುತೋಡಿತು | ಕಾಲಿನ ನೀತಿಯ | ಕೇಳುತಲಾಕ್ಷಣದೀ || ೬ ||

### ಭಾಮಿನಿಷಟ್ಪದಿ.

ಅಬ್ಬರಿಸಿ ಮುಂದೊತ್ತಿ ನಮುಚಿಯು | ನಿಬ್ಬರದಿ ಪರಬಲದೊಳಗೆ ಮದ | ದುಬ್ಬಿನೊಳಗೈತರಲು ಕೇಳುತ ಮಘವ ಬಿಲ್ಪಿಡಿದೂ || ತೆಬ್ಬನೇರಿಸಿ ಕೂರಲಗುಗಳ | ಮಬ್ಬರಿಸುತಾ ಭೂತಗಣಗಳ | ಹಬ್ಬಮಾಡುವೆನೆಂದು ಶರಗಳ ಸುರಿಸುತಿಂತೆಂದಾ || ೧ ||

### ರಾಗ ಭೈರವಿ, ಅಷ್ಟತಾಳ.

ಖೂಳ ದೈತೇಯ ಕೇಳೂ | ಲೋಕದಿ ಮುಂದೆ | ಬಾಳುವೆ ಸಾಕೆ ಹೇಳೂ || ಕಾಳಗದೊಳು ನಿನ್ನ | ತೋಳಬಲುಹ ತೋರು | ತಾಳಿಗೆಯರಿವೆನೀಗಾ || ೧ || ಮಘವಾ ನಿನ್ನೊಡನೆ ಕಾದೀ | ನೋಡರೆ ನೋಡು | ನೊಗವ ತೋರೆನು ಜಗದೀ || ಹಗೆಯೈಸೆ ದಾನವ | ರಿಗೆ ನಿನ್ನ ಬಗೆಯೆನೆಂ | ದಗಣಿತ ಶರವೆಚ್ಚನೂ || ೨ || ಬರುವ ಶರವ ತರಿದಾ | ಕೋಪದೊಳಂದು | ಶರವರುಷವ ಸುರಿದಾ || ದುರುಳನ ಧನುವಾ ತಾ | ಮುರಿದು ಸಾಹಸದಿಂದ | ಮೆರೆದ ಶಚೀಂದ್ರನಾಗಾ || ೩ || ಪೊಸ ಧನುವನು ಧರಿಸೀ | ಕಾಳೋರಗ | ವಿಶಿಖವೊಂದನು ಜೋಡಿಸೀ || ಅಸುರನಬ್ಬರದಿಂದ | ಲೆಸೆಯಲು ಗರುಡನಿಂ | ದಸಮಸಾಹಸಿ ಖಂಡಿಸೀ || ೪ ||

ರಾಗ ಕಾಂಬೋಧಿ, ಝಂಪೆತಾಳ.

ಖ್ಯಾತಿಯಿಂದಾಗ ಸುರ | ನಾಥ ಹೂಡಿದನು ವರ | ವೀತಿಹೋತ್ರನ ಶರವ ಭರದೀ || ಘಾತಿಸುವೆನೆಂದೆನುತ | ಲಾತತೀಕ್ಷ್ಣ ಶರವ | ಕಾತುರದೊಳೆಸೆದ ದಾನವಗೇ || ೧ || ವರುಣಾಸ್ತ್ರದಿಂ ಖಂಡಿಸುತ | ದುರುಳ ತಾ ನಗಸರಳ | ಉರಿವ ಕೋಪದಿ ಗುರಿಯಿರಿಸೀ || ಉರಕೆಸೆಯಲಮರಪತಿ | ತರಿದು ಕುಲಿಶದಿ ಬಳಿಕ | ಪರಿಕಿಸುವೆ ಬಲುಹನೆಂದೆನುತಾ || ೨ || ತೆಗೆದು ಕುಲಿಶವನು ಖಿಡಿ | ಯುಗುಳೆ ಕಂಗಳಲಿ ತಡಿ | ಯಿಗೊಬಿಡುವೆನೆಂದು ತಿರುತಿರುಹೀ || ಮಘವ ನೆಸೆಯಲು ದುರುಳ | ನಿಗೆ ತಾಗಿ ಪರಲೋಕ | ದಗಣಿತಾನಂದವನು ಪಡೆದಾ || ಖ್ಯಾತಿಯಿಂದಾಗ || ೩ ||

ಭಾಮಿನಿಷಟ್ಪದಿ.

ವೀರ ನಮುಚಿಯು ಮಡಿಯಲಸುರರ | ಭೂರಿಬಲವನು ಸವರುತಲೆ ಖತಿ | ಯೇರಿ ವಾಸವ ಮುಂದರಿಸುತಿರೆ ಜಂಭನೈತಂದೂ || ತೋರು ನಮುಚಿಯ ಕೊಂದವನ ಶಿರ | ಹಾರಿಸುತ ಶೋಣಿತವ ಘರ್ರನೆ | ಹೀರೆನುತಲಾರ್ಭಟಿಸೆ ತಡೆದು ಬಿಡೌಜಸೆಂತೆಂದಾ || ೧ ||

ರಾಗ ಭೈರವಿ, ಏಕತಾಳ.

ದುರುಳನೆ ನಮುಚಿಯ ಶಿರವಾ | ಕಡಿ | ದಿರಿಸುತ ತವ ಭುಜಬಲವಾ || ಪರಿಕಿಸಲೈತಂದಿಹೆನೂ | ನೀ | ನೊರೆ ಯಾರೆಂಬುದನೂ || ೧ || ಜಂಭಾಸುರನಾಗಿರುವೇ | ತವ | ಬೆಂಬಲವೆಲ್ಲವ ಮುರಿವೇ || ಅಂಬುಧಿಗೆಸೆಯುವೆ ಭರದೇ | ಜಯ | ವೆಂಬುದ ಮರೆಯೆಲೊ ಮನದೇ || ೨ || ಆಗದ ಕಾರ್ಯವ ಬರಿದೇ | ನುಡಿ | ದಾಗುವುದೇನೆಲೊ ಮನದೇ || ಕೂಗಿದ ನಮುಚಿಯು ಹೀಗೇ | ಕಡೆ | ಸಾಗಿದ ನೋಡ್ ಯಮನೆಡೆಗೇ || ೩ || ನಮುಚಿಗೆ ಸರಿಯೆಂದೆನುತಾ | ಯೇ | ಸುಮನಸರೊಡೆಯನೆ ಸಿರತಾ || ಭ್ರಮಿಸದಿರರೆ ಕ್ಷಣದೊಳಗೇ || ಮದ | ಶಮನವಗೊಳಿಸುವೆ ನಿನಗೇ || ೪ || ಎಂದಾಗಲೆ ಖ್ಯಾತಿಯಲೀ | ಶರ | ವೃಂದಗಳನು ಸುರಿಸುತಲೀ || ಮಂದಮತಿಯು ಬಲವಿರಲೂ | ತಾ | ಳೆಂದಾಗಲೆ ಗರ್ಜಿಸಲೂ || ೫ || ಕಡಿಯುತಲದ ಪಥದೊಳಗೇ | ಸುರ | ರೊ

ಡೆಯನು ತಾ ಗುರಿಯೊಳಗೇ || ಬಿಡಲು ಸದಾಗತಿಶರವಾ | ಕಂ | ಡೊಡನಾ ತನು ಫಣಿಶರವಾ || ೬ || ಎಸೆದಾ ಬಾಣವ ಗೆಲಿದೂ | ನಿಂ | ದಿಸಿದರೆ ವಾಸವ ಮುನಿದೂ || ಪೊಸಮುಸೆ ಶರಗಳಸೆಸೆದಾ | ಕರ | ದಸುರನ ಚಾಪವ ಮುರಿದಾ || ೭ ||

ಕಂದ.

ಕಡಿಯಲ್ ಚಾಪವ ದನುಜಂ | ಪಿಡಿಯುತ ಗದೆಯಂ ಭರದಿಂದೆಸೆಯಲ್ ಕಂಡಾ || ಕಡೆಗಾಲದ ಮೃಡನೋಲ್ ಸುರ | ರೊಡೆಯಂ ಖತಿಯಂ ತಾಳುತಲಾಗಲೆ ಜವದಿಂ || ೧ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಘನತವಕದಿಂ ಕಡಿಯೆ ಗದೆಯನು | ದನುಜ ಪೊಸಧನು ಪಿಡಿದು ಭಲರೇ | ನಿನಗೆ ಬಲುಹಿನಿತಿರಲು ನೋಡುವೆ | ನನುವರದಲೀ || ೧ || ಉಬ್ಬದಿರು ಧನುಗದೆಯ ಕಡಿದೆಯ | ಉಬ್ಬಸವ ಮಾಡುವೆನು ಮುನಿದರೆ | ಹೆಬ್ಬುಲಿಯ ಸೀಳುವೆನು ಬಿಡು ನಿ | ನ್ನಬ್ಬರವನೂ || ೨ || ಎಂದ ಮಾತಿಗೆ ಸುರಪ ನಸುನಗೆ | ಯಿಂದ ಧುರವೆಂದೆನಲು ಕಾಡಿನ | ದೊಂದು ಮಿಗವನು ಸೀಳ್ದ ತೆರಯಿರ | ದೆಂದು ತಿಳಿಯೋ || ೩ || ಮಂದಮತಿಗಳು ತಿಳಿಯದಂದದಿ | ಬಂದು ಸುರಬಲವನ್ನು ತಾಗಿದ | ಕಿಂದು ಫಲವುಣಬೇಕೆನಲು ಖತಿ | ಯಿಂದ ದನುಜಾ || ೪ || ಬಲ್ಲೆಬಲ್ಲೆನು ನೀನು ಸುರಬಲ | ವೆಲ್ಲವನು ಕೂಡಿಸುತ ಶಂಕರ | ನಲ್ಲಿಗಲ್ಲವೆ ಪೋಗುವವ ನಾ | ಬಲ್ಲೆನ್ನೆಸೇ || ೫ || ಶಿವನ ಕಾಂಬುಜ್ಜಗವ ಮರೆ ಯಿ | ನ್ನವಧರಿಸು ದೇಹವನು ಕಾಡಿನ | ಶಿವನ ಪಾಲಿಗೆ ಕೊಡುವೆ ನಿಮಿಷದಿ | ಬವರದೊಳಗೇ || ೬ || ಭೂರಿಖತಿಯಲಿ ಸುರಪನುಸುರಿದ | ಆರು ಜಂಭನ ನಾಮವಿತ್ತರೊ | ತೋರುತಿಗ ಮಾತಿನಲಿ ಜಂಭವು | ಭಾರವಾಗೀ ||೭|| ಆಡುವುದು ಬಹುಸುಲಭ ಮಾತಿನೊ | ಳೋಡಿಯೋಗುವರಲ್ಲ ಬಲವಿದೆ | ಮೂಢ ಸಂಗ್ರಾಮದಲಿ ತೋರಲು | ನೋಡಿಕೊಂಜೀ || ೮ ||

ವಾರ್ಧಿಕಷಟ್ಪದಿ.

ಸುರಪನಾಡಿದ ನುಡಿಗೆ ದಾನವಂ ಪರಿಕಿಸಾ | ದರೆ ಬಲುಹನೆಂದುರಗವರುಣ ಪಾವಕಶರವ | ಸುರಿಸಿದಂ ಸುರಬಲಂ ಕಂಗೆಡಲ್ ಸುರಪಾಲ ಚಾ

ಪಮಂ ಝೋಗ್ಯೈವುತಾ || ಭರಿತರೋಷದಿ ಗರುಡ ವಾಯು ಜಲಬಾಣದಿಂ | ತರಿದು ಕೆಡಹಲ್ ಘೋರ ರಕ್ಕಸಂ ನಾರಾಚಕು | ಮಿರುಗುತಿಹ ಕೂರಸಿಯ ಝುಳಪಿಸುತ ಸುರಪತಿಯ ಮೇಲ್ವಾಯ್ದಲಾಕ್ಷಣಾದಲೀ || ೧ ||

ರಾಗ ಸಾರಂಗಿ, ಏಕತಾಳ.

ಸುರಪನು ವಹಿಲದಿ | ತರಿಯಲು ಖಡ್ಗವ | ದುರುಳನು ಕೋಪದಲೀ || ತೆರೆಯುತ ಬಾಯಿಯ | ಬರುತಿರೆ ಕಾಣುತ | ಪರಿಕಿಸಿ ಸಾಹಸಿಯೂ || ೧ || ಮೂಳ ಖಳನೆ ಬಲ | ದೇಳಿಗೆಯಿನಿತಿರೆ | ಕಾಳಗದಲಿ ನಿನ್ನಾ || ಸೀಳುವೆ ರುದ್ರಾಸ್ತ್ರ | ದೊಳೆನುತಲಿ ಸುರ | ಪಾಲಕ ಕರದೊಳಗೇ || ೨ || ಪಿಡಿಯುತ ಶರವನು | ಧಡಿಗನಿಗೆಸೆಯಲು | ಕಡಿಯುತ ಕಂಠವನೂ || ಪೊಡವಿಗೆ ಕೆಡುಹಲು | ಬಿಡಿಯುಗುಳುತ ಖಳ | ಪಡೆ ಬರುತಿರಲಾಗಾ || ೩ || ಶರಿತರಿಯುತ ಸುರ | ವರ ಪರಬಲವನು | ಮುರಿಯುತ ಪೆಣಗಳನೂ || ಧರಣಿಯೊಳೊರಗಿಸಿ | ಮೆರೆಯಲು ಕೇಳುತ | ದುರುಳರ ಬಲದೊಳಗೇ || ೪ ||

ಕಂದ.

ಮಡಿದನು ಜಂಭಾಸುರನೆನೆ | ಘುಡುಘುಡುಗುಡಿಸುತ ಶತಮಾಯಂ ಕೋಪದಿ ಕರಮಂ || ಕಡಿಕಡಿಯುತಲಾ ಸುರಬಲ | ದೊಡೆಯಗೆ ಶರ ಬಿಡುತಡಹಾಯ್ದೆಂದಂ ಗರ್ಜಿಸೀ || ೧ ||

ರಾಗ ಶಂಕರಾಭರಣ, ಮಟ್ಟೆತಾಳ.

ಸುರಪ ಕೇಳು ನಮ್ಮ ಬಲವ | ತರಿದ ಬಲುಹ ಮುರಿವೆನೀಗ | ಕರದಿ ಪಿಡಿದ ವಜ್ರವೆಲ್ಲ | ಧರಿಸೊ ಬೇಗನೇ || ೧ || ಕುಲಿಶಹತಿಯ ತಾಳಿ ಪ್ರಾಣ | ಉಳಿಸಿಕೊಂಡು ಪೋಪ ಬಗೆಯ | ಅಳವಿಯೊಳಗೆ ಕಾಣಬಹುದು | ಘಳಿಗೆ ತಡೆದರೇ || ೨ || ಸಮರದೊಳಗೆ ವೀರ ಜಂಭ | ನಮುಚಿಯಿರ್ವರನ್ನು ಗೆದ್ದು | ಭ್ರಮಿತನಾದೆ ಗರ್ವದಿಂದ | ಶಮನಗೊಳಿಸುವೇ || ೩ || ಸಾಕುಸಾಕು ತಿರವ ಕಡಿದು | ಶಾಕಿನಿಯರ ಬಳಗಕೀವೆ | ಜೋಕೆಯೆಂದು ಶರವನೆಸೆದ | ನಾಕಪ್ಪೈರಿಯೂ || ೪ || ಬರುವ ಶರವ ಕಡಿದು ದುರುಳ | ಶರವನೊಂದ

ತೆಗೆದು ದಿವಿಜ | ರರೆಯನಿಂಗೆ ಗುರಿಯ ನೋಡಿ | ಭರದೊಳೆಚ್ಚನೂ || ೫ ||
ಕಡಿದು ಸುರಪ ನಡುವೆ ಖಳರ | ಗಡಣದೊಳಗೆ ಧೀರ ನೀನು | ಧಡಿಗ ನಿನ್ನ
ನಾಮವೇನು | ನುಡಿಯೊ ಬೇಗನೇ || ೬ || ಆರದಾದರೇನು ಧುರದಿ | ತೋ
ರು ಶೌರ್ಯವನ್ನು ದೈತ್ಯ | ವಾರದೊಡೆಯ ವೀರ ಶತಕ | ಮಾಯನಾಗಿಹೇ ||
|| ೭ || ಎಂದು ಖಾತಿಯಿಂದ ತೆಗೆದ | ನೊಂದು ಮೇಘಶರವನಾ ಪು | ರಂದ
ರಾನಿಗೆಸೆದ ಕೋಪ | ದಿಂದ ದುರುಳನೂ || ೮ || ತಿಳಿಯದವನೆ ಮಘವ ಕ್ಷ
ಣಕೆ | ಘಳಿಲಶರವ ಹೂಡಿ ಮುರಿದು | ಖಳಗೆ ತಿಮಿರಶರವನೆಚ್ಚ | ನಳವಿಮ
ಧ್ಯದೀ || ೯ || ಶರಣಿಬಾಣದಿಂದ ತರಿದು | ದುರುಳ ಯೋಚಿಸಿದನು ಬರಿದೆ |
ಧುರದೊಳಿಂತೆ ಸೆಣಸಿ ವಿಜಯ | ಬರುವದಲ್ಲವೂ || ೧೦ ||

### ಭಾಮಿನಿಷಟ್ಪದಿ.

ಎಂದು ಯೋಚಿಸಿ ದೈತ್ಯನಾಗ ಪು | ರಂದರನ ಕೈಚಳಕ ಧನುವಿಗೆ |
ನಿಂದು ವಿಸ್ಮಿತನಾಗಿ ಮೂಲೋಕದಲಿ ತನ್ನೊಡನೇ || ನಿಂದು ಕಾದಿದ ಸುಭ
ಟರೊಳಗಿವ | ನಂದದವರನು ಕಾಣೆ ಸಂಗರ | ದಿಂದ ಜಯವಿರದೆಂದು ಮಾ
ಯಾವಿದ್ಯೆಯನು ತಂದಾ || ೧ ||

### ವಾರ್ಧಿಕಷಟ್ಪದಿ.

ರಕ್ಕಸನ ಮಾಯೆಯಿಂತುರುಗಿ ಭಯ ತೆತ್ತಲಂ | ಕಕ್ಕಸದ ಬಿರುಗಾಳಿ
ಧೂಳಿಯಿಂ ಮಿಂಚುಮಳೆ | ದಿಕ್ಕೆಯಾಯ್ತೆಲ್ಲೆಲ್ಲಯುಂ ತುಂಬಿದುದು ಘೋರ
ಕಾರ್ಗತ್ತಲೆಯು ಸುತ್ತಲೂ || ಇಕ್ಕೆಲದ ಶರಮಳೆಯ ದಾಳಿಯಿಂ ಸುರಸೇನೆ |
ಯುಕ್ಕಟಾ ವಿಧಿಯೆಂದು ಕಾಲ್ದೆಗೆದು ನಾಲ್ದೆಸೆಗೆ | ಕಕ್ಕುಲತೆಯಿಂ ಪಲಾಯನ
ಮೆಸಗೆ ಸುರಪಾಲ ಬಸಬಳಿದನೇನೆಂಬೆನೂ || ೧ ||

### ರಾಗ ಕೇತಾರಗೌಳ, ಅಷ್ಟತಾಳ.

ಖಳನ ಮಾಯಕದಿಂದ | ಬಳಲಿದ ಸುರನಾಥ | ಕಳನೊಳಗೆದ್ದು ತಾ
ನೂ || ಕೊಳುಗುಳದೊಳು ಜಯ | ನೆಲಸದು ನಮಗೆಂದು | ಕಳವಳಿಸುತ
ದುಃಖದೀ || ೧ || ಅಪಜಯವಾಯ್ತುಯ್ಯೊ | ಕಪಟಿಗಳಿಂದ ಮುಂ | ದಪಹಾ
ಸ್ಯವಾದುದೆಂದೂ || ಗುಪಿತದಿ ಪ್ರಮಥಾ | ಧಿಪನೆಡೆ ಮರುಗುವೆ | ವಿಪರೀತ

ವಾದುದನೂ ‖ ೨ ‖ ಎಂದು ಯೋಚಿಸಿ ಸುರ | ವೃಂದದೊಡನೆ ಬೇಗ | ಬಂದು ಗಿರಿಯನೇರಿ ಬಳಿಕಾ ‖ ಚಂದ್ರಚೂಡನ ಪಾದ | ಕಂದಾದಿತಲೆವಾಗು | ತೆಂದನೀ ತೆರದೊಳೆಲ್ಲಾ ‖ ೩ ‖

ರಾಗ ಆದಿತಾಳ.

(ವಾಟಿ:--ಬೆದರಲ್ಯಾತಕೆ ನಾರೀ ॥)

ಕರುಣಾಸಾಗರ ನೀನೂ | ಶರಣನು ನಾನೂ ‖ ಪಲ್ಲ ‖ ಕರುಣಾಸಾಗರ ನೀ | ಶರಣನಹುದು ನಾ | ಚರಣದೊಳೊರೆಯುವ | ಪರಿಗಳ ಕೇಳ್ಳೈ ‖ ಅನು ಪಲ್ಲ ‖ ಪಾದಯುಗದಿ ಮನವಾ | ನಿರಿಸುತ ಬರುವಾ | ಆದಿತೇಯರಿಗಭವಾ ‖ ಹಾವಿಯೊಳ್ ತಾಳಧೊರೆ | ಯಾದಾಂಧಕ | ನಾದುದು ಧುರ ಕೇ | ಳಾದರ ದಿಂದಲೀ ‖ ೧ ‖ ಘೋರ ದನುಜರೊಡನೇ | ಕಾದಿದೆ ಮೃಡನೆ | ವಾರತೆ ಕೇಳೊಡನೇ ‖ ಪಾರಮುಷಿಮ ಗುಣ | ಸಾರನೆ ಪೇಳುವೆ | ನಾ ರಣದೊಳ ಗಾ | ದೋರರಗೆ ಯೆಲ್ಲವಾ ‖ ೨ ‖ ಕೊಂದೆನು ಬವರದಲೀ | ಹಲವರ ಕೆರಳಿ | ಮುಂದೆ ನಮುಗೆ ಮರಳೀ ‖ ದಂದುಗ ಧುರದಲಿ | ಬಂದುದು ಪರಿಭವ | ದಂದವನೆಲ್ಲವ | ಚಂದ್ರಧರನೆ ಕೇಳ್ ‖ ೩ ‖

ಭಾಮಿನಿಷಟ್ಪದಿ.

ಸುರಪನಾಡಿದ ನುಡಿಗೆ ಶಂಕರ | ಕಿರುನಗೆಯ ಹೊರ ಸೂಸೆ ವಾಸವ | ಪರಮಕರುಣಾಸಿಂಧು ನೀನಾಗಿರಲು ಶರಣರಿಗೇ ‖ ಪರಿಭವವು ಬರಲಿಂತು ನಗುವೆಯ | ಪೊರೆವರಾರೈ ದೇವ ನೀ ಕೈ | ತೊರೆಯುವೆಯ ಯೆಂದೆನಲು ಪೇಳಿದನಾಗ ಮದನಾರೀ ‖ ೧ ‖

ರಾಗ ಕಾಂಬೋಧಿ, ಝಂಪೆತಾಳ.

ಮರುಗದಿರು ಸುರಪಾಲ | ಶರಣನಲ್ಲವೆ ನಿನ್ನ | ಪರಿಭವಕೆ ನಗಲುಂಟೆ ಬರಿದೇ ‖ ದುರುಳ ರಕ್ಕಸರ ಮದ | ಭರಿತವಾಯ್ತೆನ್ನನೇ | ಧುರಕೆ ಕರೆಯು ವರೇನನೆಂಬೇ ‖ ೧ ‖ ಅಂಧಕಾಸುರನೆಂಬ | ಮಂದಮತಿಯೋರ್ವ ಧುರ | ಕೆಂದು ಬಲಗೂಡಿ ನಮ್ಮೆಡೆಗೇ ‖ ಬಂದಿಹುದ ನೆನಸಿ ತನ | ಗಿಂದು ನಗು ಬರಲು ಕೇ | ಳೊಂದು ಕಾರಣ ತಿಳಿದೆಯೇನೈ ‖ ೨ ‖ ಜನುಮವಿತ್ತವ ನಾ ನು | ದನುಜನಿಗೆ ಪೇಳಲೇ | ನನುಮಾನ ತೊರೆದು ಸಂಗರಕೇ ‖ ಮನವೊಲಿ

ದು ಬಂದಿಹನು | ತನಿರಕುತವನ್ನು ಶಾ | ಕಿನಿಗಣಗಳಿಂಗಿಕ್ಕದಿಹನೇ || ೩ ||
ಬಿಡು ಭಯವ ಮನದಿ ನಾ | ಪಿಡಿದ ಶೂಲದಿ ತಿವಿದು | ಕಡೆಗಾಲವನು ತೋ
ರಿಕೊಡುವೇ || ಕಡಿದು ದಾನವರ ಬಲ | ದಡಗುಗಳ ಕಾಡಮೃಗ | ಗಡಣಗ
ಳಿಗಶನವಿಕ್ಕುವೆನೂ || ೪ || ಎಲ್ಲಿಹೆಯೊ ನಂದೀಶ | ಮಲ್ಲ ಸಾಹಸವಂತ |
ಸೊಲ್ಲನೊಂದನು ಕೇಳೊ ನಮ್ಮಾ || ಮಲ್ಲಗಣಗಳ ಬಲವ | ನೆಲ್ಲ ಕರಸೀಗ
ಸೀ | ನಿಲ್ಲಿ ಬರಹೇಳು ಷಡ್ಶಿರನಾ || ೫ || ಎಂದು ನೇಮವನೀಯು | ಲಂದು
ಗಣಗಳನೆಲ್ಲ | ಪೊಂದಿಸುತ ನಂದೀಶನಾಗಾ || ನಿಂದಿರಲು ಹರನೆಡೆಗೆ | ಬಂದು
ಪಾದದಿ ಮಣಿದ | ನಂದದಿಂದಾ ಶಕ್ತಿಧರನೂ || ೬ ||

ಭಾಮಿನಿಷಟ್ಪದಿ.

ದೇವ ದೇವರ ಬಾಲನನು ನೀವ್ | ದಾವ ಕಜ್ಜಕೆ ಕರಿಸಿದಿರಿ ತನ | ಗಾ
ವುದಪ್ಪಣೆಯೆಂದು ಪಾದದೊಳೆರಗೆ ಪಿಡಿದೆತ್ತೀ || ಬಾ ವಿಹಂಗಾಗೂಢ ದೈ
ತ್ಯರ | ಭಾವನೆಯನೊರೆಯುವೆನು ನಮ್ಮೊಳ | ಗಾಹವಕೆ ಬಂದಿಹರು ಪೇಳು
ವುದೇನು ವಿಸ್ಮಯವಾ || ೧ ||

ರಾಗ ರೂಪಕತಾಳ.

ಕಂದ ಕೇಳೆಮ್ಮೊಡ | ನಂಧಕಾಸುರಗಿಂದು | ಬಂದು ಕಾಳಗಗೊಡ
ಲೆಂದೂ || ನಿಂದಿಹ ಬಲಸಹಗೂಡಿ | ಬಂದು ಗಿರಿಯ ತಟ | ದೊಂದೆಸೆಯೊಳು
ಷಮ್ಮಿನಿಂದಾ || ೧ || ಪನಪ್ಪುದೆಂಬುದ | ದಾನವರರಿಯದೆ | ಹೀನತನದಿ ಬಂ
ದಿರುವರೂ || ಎನ್ನಿಂದ ಜನುಮವ | ಮುನ್ನ ಪಡೆದ ದೈತ್ಯ | ಗೆನ್ನಿಂದ ಪರಿ
ಭವವಹುದೂ || ೨ || ಮಾಡುವುದೇನು ಬಲ | ಗೂಡಿ ಪೋಪುದು ನೀನು |
ಗಾಢದಿಂ ಬಹೆ ನಾನು ಹಿಂದೇ || ಮೂಢರ ತಲೆಯ ಚಂ | ಡಾಡೆಂದು ವರ
ಚಂದ್ರ | ಚೂಡನೆಂದನು ಸುತನೊಡನೇ || ೩ || ಸುರಪಾಲಕನು ಬಲ | ನೆ
ರಸಿ ತಾ ಬರುತಿರೆ | ದುರುಳರು ತಡೆದು ಮಾರ್ಗದಲೀ || ಸುರರ ಕಂಗೆಡಿ
ಸಲು | ಸುರವರಸ್ಯೆತಂದೂ | ಒರೆದನೆಲ್ಲವನು ದುಃಖದಲೀ || ೪ || ವಾಸವ
ನೊಡಗೂಡಿ | ನೀ ಸಮರಕೆ ಪೋಗು | ಆ ಶುಕ್ರಶಿಷ್ಯರ ಧುರದೀ || ನೋಸ
ನಾಯಕವಿರೆ | ಘಾಸಿಮಾಡಲು ಕಮ | ಲಾಸನ ಬರುವನೆಂದೆನುತಾ || ೫ ||

ರಾಗ ಘಂಟಾರವ, ಏಕತಾಳ.

ಕರೆದು ವಿರಿಂಚಿಯನೂ | ಶಂಕರನು | ಅರುಹಿದ ಪರಿಗಳನೂ || ಕರೆದು ವಿರಿಂಚಿಯ | ದುರುಳ ಬಲವ ಸಂ | ಹರಿಸಲು ಪೋಗೆಂ | ದರುಹುತ ಶಂಕರ || ಪಲ್ಲ || ದೈತ್ಯಬಲವ ಕೊಂದೂ | ವಿಜಯವ ವಿ | ಧಾತನೆ ಪಡೆಯೆಂದೂ | ಹರುಷದಿ | ಭೂತನಾಥನಂದೂ | ಪೇಳೆ ಕಮಲ | ಜಾತನಿಗಿದನಂದೂ || ಕೇಳ್ದು ವಿ | ಧಾತನು ತಾ ಪುರು | ಹೂತನನೊಡಗೊಂ | ಡಾತುರದೊಳು ಸಮ | ಜಾತನು ಪೊರಟಾ || ೧ || ಅನಿತರೊಳಗೆ ಮುದದೀ | ಬಂದಾ ಗುಹ | ಮಣಿಯುತ ಸಂತಸದೀ | ರಕ್ಕಸ | ಹನನಕೆ ಪದಯುಗದೀ | ನೀ ಕೊಡುವುದು | ತನಗನುಮತಿ ಭರದೀ || ಬೇಡುವೆನೆನುತಲೆ | ಪಾದದಿ ಮಣಿಯಲು ಕಾಣುತ | ಚಿನುಮಯ ಸಂತಸದೀ || ೨ ||

ಭಾಮಿನಿಷಟ್ಪದಿ.

ನಾಗಭೂಷಣ ಮಣಿದ ಕುವರನ | ಬೇಗದಿಂ ತೆಗೆದಪ್ಪಿ ಜಯ ನಿನ | ಗಾಗಲೈ ಪೋಗೆಂದು ಹರಸಲು ಗುಹನು ಮನದೊಳಗೇ || ಪೋಗುವೆನೆ ಮಾತೆಯನು ಕೇಳದೆ | ಆಗದಾಗದೆನುತ್ತ ಯೋಚಿಸಿ | ತಾ ಗಿರಿಜೆಯಿದ್ದೆಡೆಗೆ ಬಂದೆರಗುತ್ತಲಿಂತೆಂದಾ || ೧ ||

ರಾಗ ಸೌರಾಷ್ಟ್ರ, ಅಷ್ಟತಾಳ.

ವಂದಿಸಿ ಪಾದದೊ | ಳೊಂದು ಬಿನ್ನಹಗೈವೆ | ಕೇಳ್ವುದಮ್ಮಾ || ನಿಮ್ಮ | ಕಂದನು ಪೊರಟಿಹ | ನಿಂದು ಸಂಗರಕಾಗಿ | ಕೇಳ್ವುದಮ್ಮಾ ||೧|| ಅಂಧಕಾಸುರ ಮದ | ದಿಂದ ಸಂಗರಕಾಗಿ | ಬಂದನಮ್ಮಾ || ಅದ | ರಿಂದ ಪ್ಪಣೆಯ ಬೇಡ | ಲೆಂದು ಬಂದಿಹೆ ಮಾತ | ಕೇಳ್ವುದಮ್ಮಾ || ೨ || ದೈತ್ಯಬಲವನೆಲ್ಲ | ಘಾತಿಸಿ ಬರುವೆನು | ಕೇಳ್ವುದಮ್ಮಾ || ತನು | ಜಾತಗಪ್ಪಣೆಯನ್ನು | ಪ್ರೀತಿಯಿಂದಲಿ ಬೇಗ | ಕೊಡುವುದಮ್ಮಾ || ೩ ||

ವಾರ್ಧಿಕಷಟ್ಪದಿ.

ಎಂದು ಪದದೊಳ್ ಮಣಿದ ಗುಹನ ಪಿಡಿದೆತ್ತಿ ಗಿರಿ | ನಂದನೆಯು ಹರುಷದಿಂ ವೈರಿಗಳ ಕೊಂದು ಜಯ | ಪೊಂದಿ ಬಾರೆಂದೆನುತ ಕಳುಹಿದಳ್

ಜಯಘೋಷದಿಂ ಪೊರಟನಾ ಕುಮಾರಾ || ಮುಂದುಮುಂದಕೆ ಸೇನೆ ನಡೆಯುತಿರಲೇನೆಂಬೆ | ನಂದದಿಂ ಗಿರಿಯನಿಳಿದೈತರಲ್ ಬ್ರಹ್ಮಾಂಡ | ಮಿಂದೊಡೆಯುದಿರಡೆನಲ್ ಪಡೆಯಬ್ಬರಕೆ ಭೂಮಿ ನಡನಡುಗಿತೇನೆಂಬೆನೂ || ೧ ||

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಶರಜನಿತ್ತಲು ಧುರಕೆ ಪೊರಡಲು | ದುರುಳ ರಕ್ಕಸನೆರವಿಯೊಡನಾ | ದುರುಳನೋಲಗದೊಳಗೆ ಕುಳಿತನು | ಗಿರಿಯ ತಟದೀ || ೧ || ಕಾಣದಿರೆ ಬಲ ನಮುಚಿಜಂಭರ | ಕೇಣಗೊಂಡಾ ದಾನವೇಂದ್ರನು | ಜಾಣನಹ ಶತವಾಯುನನು ಕರ | ದೆಂದನಿಂತೂ || ೨ || ಕೀಳು ಮಘವನು ನಮ್ಮ ಬಲವನು | ಕಾಳಗದೊಳಟ್ಟಿಣಿಸಿ ಹಲವರ | ಸೀಳಿ ತಪ್ಪಿಸಿಕೊಂಡನಲ್ಲವೆ | ಪೇಳಲೇನೂ || || ೩ || ಜಂಭನಳಿದನೆ ನಮುಚಿ ಮಡಿದನೆ | ಹಂಬಲಿಸುತಿದೆ ಮನವು ಶಿವಶಿವ | ಕುಂಭಿನಿಯೊಳಿನ್ನೆಂತು ಬಾಳುವೆ | ನೆಂದು ದೈತ್ಯಾ || ೪ || ಏನು ಸಂಗರಕಾಗಿ ಶಿವನೆಡೆ | ಗಾನು ಬಂದವನಾಗಿ ನುತಿಸಿದೆ | ಹೀನನಾದೆನೆನುತ್ತ ಪೇಳಿದ | ದಾನವೇಂದ್ರಾ || ೫ ||

### ಭಾಮಿನಿಷಟ್ಪದಿ.

ಓಡಿ ತಪ್ಪಿಸಿ ಪೋಪನಾದರೆ | ನೋಡುವೆನು ಜಂಭಾರಿ ಜನನಿಯು | ಜೋಡಿಕೊಂಡುರದೊಳಗೆ ಮರೆಯಾಗಿರಲು ಖ್ಯಾತಿಯಲೀ || ತೋಡುವೆನು ತನಿಗರಳ ಶಂಕರ | ನೋಡಿ ತಡೆದರೆ ಜತೆಯೊಳಗೆ ಹೊಡೆ | ದೋಡಿಸುವೆನೆಂದೆನುತ ಗರ್ಜಿಸಿ ದೈತ್ಯ ಪಲ್ಗಡಿದಾ || ೧ ||

### ವಾರ್ಧಿಕಷಟ್ಪದಿ.

ಕೇಳಿದೈ ರಾಮ ನೀ ರಕ್ಕಸಂ ಕೋಪದಿಂ | ಕಾಳಗಕೆ ಪೊರಮಡಲ್ ಚಾರನೋರ್ವಂ ಬಂದು | ಪೇಳಿದಂ ಚೆಲುವಾಯ್ತು ಪ್ರಮಥಗಣದೊಡನೆ ಶರಜಾತ ಕಮಲಜರಿಬ್ಬರಾ || ಫಾಲನಯನನು ಕಳುಹಿಸಲ್ ಬರುವರಿದೊ ನೋಡು | ಶೂಲಿ ಬೆಂಗಡೆಯೆ ಬರುತಿರುವನೆಂದೆನೆ ಕೇಳಿ | ಖೂಳ ಶತವಾಯ ಪಡೆದಪ್ಪಣೆಯ ನಡೆದಾದ ಪ್ರಮಥಬಲಮಂ ತಾಗಿದಾ || ೧ ||

ಕಂದ.

ಶತವಾಯಂ ಬರುತಿರಲಾ | ಶತದಳಸಂಭವ ಧನುವಂ ತೂಗುತ ಶರ ಮಂ || ಖತಿಯೊಳ್ ಪಿಡಿದಿದಿರಾಗಲ್ | ಶತವಾಯಂ ತಡೆದಿಂತೆಂದಂ ಪ್ರತಿ ಭಟಿಸೀ || ೧ ||

ರಾಗ ಭೈರವಿ, ಏಕತಾಳ.

ಕಮಲಜ ನವ್ಮೊಳು ಬರಿದೇ | ನೀ | ಸಮರವ ಕೊಡದಿರು ಸುರಿದೇ || ನಮಗೆ ವಿರೋಧವ ಮಾಡೀ | ಕೇ | ಳಮರತೆ ಪೋಪುದು ಖೋಡೀ || ೧ || ಹರನ ವಿರೋಧದಿ ನಿಮಗೇ | ಸುಖ | ದೊರೆವುದೆ ಸಾಯುವ ಬಗೆಗೇ || ಧು ರಕ್ಕೈತಂದುದು ನಿಜವ್ಹೂ | ಕ | ತ್ತರಿಸದಿರೆನು ನಾ ದಿಟವ್ಹೂ || ೨ || ಓಡಿದ ಸು ರಪನ ಜತೆಗೇ | ಜತೆ | ಮಾಡುವೆ ಕ್ಷಣ ತಡೆ ನಿನಗೇ || ನೋಡಿಕೊ ಬದು ಕುವ ಪಥವಾ | ಕಡಿ | ದೀಡಾಡುವೆ ತವ ಶಿರವಾ || ೩ || ಸುರಪತಿ ಕೊಂದಿಹ ಬಲವಾ | ಯೋ | ದುರುಳನೆ ಬಲ್ಲೆಯ ಗೆಲುವಾ || ಧುರಭಟ ನೀ ಬಲ ಕೊ ಲಿಸೀ | ನಿಂ | ದಿರುವುದು ಸರಿಯೇ ಸಹಸೀ || ೪ || ಪದುಮಭವನ ನುಡಿಗ ಳನೂ | ಕೇ | ಳ್ದೊದೆಯುತ ಧರಣಿಯ ಬಳನೂ || ಸದೆಯುವೆನೆನ್ನುತ ದುರು ಳಾ | ತಾ | ನೊದಗಿಲಿ ಹೊಡೆದನು ಸರಳಾ || ೫ || ಕಡಿಯಲು ಕಮಲಜ ನಡುನೇ | ಖಳ | ಧಡಿಗನು ಪೇಳಿದ ಸುಡುನೇ || ತಡೆದುಕೊ ಬಲವಿರಲೆಂ ದೂ | ತಾ |ಹೊಡೆದನು ವಹ್ನಿಯನಂದೂ || ೬ || ವಾಣಿಯ ರಮಣನು ಜಲ ದಾ | ವರ | ಬಾಣವನೆಸೆಯುತ ಗೆಲಿದಾ || ದಾನವ ಬಲುಹಿನಿತಿರಲೂ | ಕೈ | ಗಾಣಿಪೆ ನಾನೆಂದೆನಲೂ || ೭ ||

ರಾಗ ಘಂಟಾರವ, ಅಷ್ಟತಾಳ.

ಗೆಲುವಾಸೆಯಲಿ ಬ್ರಹ್ಮನೆ ಸಾಯುವೆ ನಿಜ | ಗಳವ ಕಡಿದೀಡಾಡಿ ವಾ ರಿಯ | ಬಳಗಕುಣಿಸುವೆನೆಂದು ಶರ ಬಿಡೇ || ೧ || ಕಡಿದೊಂದು ಶಕ್ತಿಯನು ಬಿಡೆ ಬ್ರಹ್ಮ | ತಡೆಯದಾಗಲೆ ಬಿದ್ದು ರಕ್ಕಸ | ಪೊಡವಿಯಿಂ ಕ್ಷಣಕೆದ್ದು ನುಡಿದನೂ || ೨ || ಧೀರನಾದರೆ ಶೂಲವ ತಡಿಯೆಂದು | ಭಾರಿ ಭುಜದೊಳ ಗೆತ್ತಿ ಗುರಿಯಲಿ | ಧೀರನಿಹೆ ನೀನೆಂದು ರಕ್ಕಸಾ || ೩ || ಬಿಡಲಾಗ ಕಮಲ ಜಾತ ಕಡಿದೆಂದ | ಧಡಿಗ ರಕ್ಕಸ ನಿನ್ನ ಸಮರದ | ಕಡೆಯಗಾಣಿಪೆ ತಡೆಯ

ಲರೆಕ್ಷಣಾ || ೪ || ಎಂದಾಜ ಶರವೊಂದ ತೆಗೆದು ಖಾತಿಯಲಿ | ಮಂದಮತಿ
ಗೆಸೆಯಲ್ಕೆ ರಕ್ಕಸ | ನಂದು ವರಲೋಕವನು ಸೇರಿದಾ || ೩೯ ||

### ವಾರ್ಧಿಕಷಟ್ಪದಿ.

ಶತಮಾಯನಂ ಕೊಂದು ಶತಪತ್ರಸಂಭವಂ | ಶತ್ರುಬಲಮಂ ಸವರಿ
ದಂ ಕುಂಭನಂ ಕೊಂದು | ಹತಗೈದು ಚಂಡಮುಂಡಾಸುರರ ಸೀಳಿದಂ ತಾ
ನಾ ಮಹಾಸಾಭಸಂ || ಗತಿಯ ಕಾಣಿಸಿ ಹಲವರಿಂಗೆ ಮುಂದರಿಸುತಿರೆ | ಪ್ರತಿ
ಭಟಭಯಂಕರಂ ಶುಂಭಾಸುರಂ ಕಂಡು | ಖತಿವಿಡಿದು ಚಾಪಟಂಕಾರದಿಂ
ಬ್ರಹ್ಮನಂ ತಡೆದಾಗಲಿಂತೆಂದನೂ || ೧ ||

### ರಾಗ ಕಾಂಬೋಧಿ, ಝಂಪೆತಾಳ.

ಶತಮಾಯನನು ಕೊಂದೆ | ಅತಿಬಲಾನ್ವಿತ ಮುಂದೆ | ಪತಿತನೆಂದೆಣಿಸ
ದಿರು ಬ್ರಹ್ಮಾ || ಗತಿಸಿರುವರಿಂಗೆ ಮನ | ಕತಿಹರುಷವನು ಮಾಳ್ಪೆ | ಜತೆಗೆ
ಶಿತಿಕಂಠನನು ಕರಿಸೋ || ೧ || ಕಾಗೆಮರಿ ನಿನ್ನೊಡನೆ | ತಾಗಬೇಕೇ ಶಿವನು |
ಸಾಗರವ ನರಿ ಹಾರಲುಂಟೇ || ಕೂಗದಿರು ಯಮನೆಡೆಗೆ | ಸಾಗಿಸುವೆ ಶರ
ಮುಖದಿ | ಪೋಗು ಸತ್ತವರ ಧೊರೆಯಾಗೂ || ೨ || ಯಮನೆಂಬವನ ಬಲು
ಹ | ನಮಮ ಬಣ್ಣಿಸಲಾರೆ | ಸಮರದಲಿ ಸೋತು ಕಾಲ್ದೆಗೆದೂ || ಅಮರಪ
ತಿಯೊಡನೆ ತಾ | ಗಮಿಸಿಹನು ಮುಂದೆ ಮುಖಿ | ಕಮಲವನು ತೋರಿಸನು
ಮರುಳೇ || ೩ || ಹರನ ವೈರದಿ ಸತ್ತ | ದುರುಳ ಗಜದಾನವನ | ಪರಿಯ ಮ
ರತೆಯ ವ್ಯರ್ಥ ಜಗದೀ || ಸ್ಮರವೈರಿಯೊಡನೆ ನಿಮ | ಗರಿತನವು ಲೇಸಲ್ಲ | ತೆರ
ಳಿರೈ ಸಾಯುವಿರಿ ಬರಿದೇ || ೪ || ಹರಿಯ ಬಿಟ್ಟರೆ ಶಿವನೊ | ಳರಿತನವು ನಮ
ಗಿಲ್ಲ | ತರಿಸಿಕೊಡುವೆಯ ಮುಕುಂದನನೂ || ದುರುಳತನದಲಿ ನಮ್ಮ | ಧೊ
ರೆಯ ಪೆತ್ತವರನ್ನು | ತರಿದಿರುವನೆನಲೆಂದ ಬ್ರಹ್ಮಾ || ೫ || ಹರನ ಮರೆಯೊ
ಳಗೆ ನಿಂ | ದಿರುವನೇ ಶ್ರೀಯೊರೆಯ | ಹರಿಯ ಮರೆಯೊಳಗೆ ಪರಶಿವನೂ ||
ಇರಲುಂಟೆ ರಕ್ಕಸನೆ | ಹರಿಹರರು ಸರಿಯೆಂಬು | ದರಿವೆಯೆಂತೈ ದುರುಳ
ಸೀನೂ || ೬ || ವೇದಶಾಸ್ತ್ರವನು ನಮ | ಗಾದರದಿ ಕಲಿಸೆ ಗುರು | ವಾದ
ವರಶುಕ್ರನಿರುತಿಹನೂ || ಮಾಧವನ ಕರತಹೆಯ | ಕಾದುವೆಯ ಪೇಳೆನುತ |
ಸಾಧಿಸುತ ಶರವೊಂದನೆಚ್ಚಾ || ೭ ||

ರಾಗ ಭೈರವಿ, ಅಷ್ಟತಾಳ.

ಹೊಡೆದಾ ಶರವ ಬ್ರಹ್ಮನು | ಖಂಡಿಸಿ ಮತ್ತೆ | ಧಡಿಗನೊಳಿಂತೆಂದನೂ || ಕೊಡದಿರು ಪ್ರಾಣವ | ಕಡಿವೆ ಗಳವನೆಂದು | ಕಡಿದಿಕ್ಕಿದನು ಚಾಪವಾ || ೧ || ಪೊಸಧನು ಪಿಡಿದು ತಾನೂ | ದೈತೇಯನು | ವಿಶಿಖವೊಂದರೊಳಜನೂ || ಎಸೆವ ಕರದಿ ಪಿಡಿ | ದಸಮುಚಾಪವನಾಗ | ವಸುಮತಿಗಿಕ್ಕಿದನೂ || ೨ || ಧನುವೊಂದ ನಿರ್ಮಿಸಿದಾ | ಸಾರಸಭವ | ಘನರೋಷವನು ತಾಳಿದಾ || ಅನಿಲಶರವನೊಂದ | ಧನುವಿಗೆ ಜೋಡಿಸಿ | ಕಿನಿಸಿನಿಂದೆಸೆದನಾಗಾ || || ೩ || ಉರಗಾಬಾಣದಿ ಕಡಿದಾ | ಶುಂಭಾಸುರ | ಉರಿವ ಕೋಪದಿ ನುಡಿದಾ || ಧುರದಿ ಗೆಲ್ಲುವ ಪರಿ | ಯರಿತೆನಿದಕೊ ಮೇಘ | ಶರವೆಂದು ಹೂಡಿದನೂ || ೪ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ವಾಯುಬಾಣದಿ ಕಡಿದನದನಾ | ತೋಯಜಾಂಬಕತನುಜ ಸಾಸಿರ | ಸಾಯಕಂಗಳ ತೆಗೆದು ಹೂಡಿದ | ನಾಯದಿಂದಾ || ೧ || ಕಡಿಕಡಿದು ಕೆಡಹುತ್ತ ಶುಂಭನು | ಖಿಡಿಗೆದರಿ ಶರ ಬಿಡಲು ಖಂಡಿಸಿ | ಘುಡುಘುಡಿಸಿ ತಾನೆಸೆಯೆ ಕಮಲಜ | ಕಡಿದನವನೂ || ೨ || ನಗುತ ಬಳಿಕಾ ಶುಂಭ ಹೂಡಿದ | ಮಗಳಮದುವೆಯ ಮಾಡಿಕೊಂಡಜ | ಮೊಗವ ತೋರಿಸಬೇಡವೆಂದಾ | ಬ್ರಹ್ಮಶರವಾ || ೩ || ಜಲಜಭವನಾಸ್ತ್ರವನು ಗೆಲಿದಾ | ನಳಿನಜಗೆ ತಾನೊಂದು ಶಕ್ತಿಯ | ಘಳಿಲನೆಸೆಯಲು ಕಮಲಜನು ಬೆಂ | ಗೊಟ್ಟನಾಗಾ || ೪ ||

ಭಾಮಿನಿಷಟ್ಪದಿ.

ಸೋತು ತಿರುಗೆ ವಿರಿಂಚಿ ಶುಂಭನ | ಘಾತಕವನೇನೆಂಬೆ ಗಣಬಲ | ಕಾತರಿಸೆ ಪೆಣಮಯವನೊಟ್ಟಿದ ನಿಮಿಷಮಾತ್ರದಲೀ || ಭೂತಗಳಿಗಾಹುತಿಯನಿಕ್ಕಿದ | ರೀತಿಯನು ಕಂಡಾಗ ಷಣ್ಮುಖ | ಖಾತಿಯಲಿ ಬಿಲ್ಪಿಡಿದು ಮುಂದೊತ್ತಿದನು ರಭಸದಲೀ || ೧ ||

ರಾಗ ಮಾರವಿ, ಏಕತಾಳ.

ಬರುತಲೆ ಶರಜನು | ದುರುಳರ ಬಲವನು | ತ್ವರಿತದಿ ತರಿತರಿದೂ || ಕರಿರಥಸೇನೆಯ | ಮುರಿದೊತ್ತುತ ನಡೆ | ತರುತಿರೆ ದಾನವರಾ || ೧ || ಪೆಣ

ಗಳ ರಾಶಿಯು | ಸೆಣವಸೆ ಜೊಂಡಿನ | ಕಣೆಗಳ ಬಿರುಮಳೆಯಾ || ಕಣನಲಿ ಕಾಣಿಸೆ | ಕಿನಿಸಿಸೊಳದನಾ | ದನುಜನು ಪರಿಕಿಸುತಾ || ೨ || ಅರಿವ ದಾನವ | ವಾರುಧಿ ವಡಬನು | ಭೋರಿಡುತ್ತೈತಹನೂ || ತೋರುವ ಸಾಹಸ | ನಾರಾಚ ದೊಳಿವ | ಸಾರೆಂಬುದ ತಿಳಿಯೇ || ೩ || ಎಂದೆನುತಾಗಲೆ | ಬಂದಾ ಶರ ಜನ | ಮಂದಮತಿಯು ತಡೆದೂ || ನಿಂದಾಗಲೆ ಶರ | ವೃಂದವ ಸುರಿಸುತ | ಲೆಂದನು ಖಾತಿಯಲೀ || ೪ ||

ರಾಗ ಶಂಕರಾಭರಣ, ಮಟ್ಟೆತಾಳ.

ಬಾಲನಿರುವೆ ಭಲರೆ ನೀನು | ಕಾಳಗದಲಿ ಧೀರನಿರುವೆ | ಪಾಲಿಸಿರುವ ರಾರು ಪೇಳು | ಪೇಳು ನಾಮವಾ || ೧ || ದನುಜ ತಾರಕಾಖ್ಯನಿಂಗೆ | ಹನನ ಗೈದ ವರಕುಮಾರ | ನೆನುವರಾನು ಶಿವಕುಮಾರ | ನೀನದಾರೆಲಾ || ೨ || ಕಮಲಜಾದಿ ಸುರರನೆಲ್ಲ | ಸಮರದೊಳಗೆ ಗೆದ್ದ ಶೂರ | ಕಮಲಜಾಪ್ತ ಶುಂಭದೈತ್ಯ | ಸಮರಶೂರನೂ || ೩ || ವೀರತನವ ಕಾಂಚೆಸೈಸೆ | ಕಾರ್ಯ ವೇನು ಧುರಕೆ ಬಂದ | ಕಾರಣಂಗಳನ್ನು ಪೇಳೊ | ಘೋರದಾನವಾ || ೪ || ಹರಿಯು ನಮ್ಮ ಧೊರೆಯ ಪೆತ್ತ | ವರನು ತರಿದನವನ ನೀವು | ಮರೆಯೊಳಿ ರಿಸೆ ಕೇಳಿ ನಾವು | ಧುರಕೆ ಬಂದೆವೂ || ೫ || ಹರಿಯು ವೈರದಿಂದ ಸತ್ತ | ದುರುಳ ತಮ ಹಿರಣ್ಯಕಶಿಪು | ದುರುಳ ಕೈಟಭಾಖ್ಯ ಮಧುಗ| ಳಿರವ ಯೋಚಿಸೋ || ೬ || ಬಲ್ಲೆಬಲ್ಲೆ ಹರಿಯ ಬಲುಹ | ನೆಲ್ಲ ಕೇಳ್ ದಧೀಚಿಯೊಡನೆ | ಫುಲ್ಲನಾಭನೇಕೆ ಸೋತ | ಮಲ್ಲ ಪೇಳೆಲೋ || ೭ || ವರದಧೀಚಿ ತಪದ ಬಲದಿ | ಹರಿಯ ಗೆಲ್ದನೊಮ್ಮೆ ನಿಜವು | ಹರನ ವಲಿಸಿ ಕಡೆಗೆ ಚಕ್ರ | ಧರಿಸಿ ಮೆರೆಯನೇ || ೮ || ನುಡಿಯ ಕೇಳಿ ಶುಂಭನೆಂದ | ನುಡಿಗಳಲ್ಲಿ ಧೀರನಹುದು | ಕೆಡುವೆಯೇಕೆ ಧುರದಿ ಬನಿದೆ | ನಡೆಯೊ ಸದ್ಮಕೇ || ೯ || ಮರಣಕಾಲ ಬಂತು ನಿನಗೆ | ಒರೆಯುಲೇಕೆ ನೀತಿಯನ್ನು | ದುರುಳ ನಿಮಿಷ ತಡೆಯೊ ನಿನ್ನ | ತರಿದುಚಲ್ಲುವೇ || ೧೦ || ತಾರಕಾರಿಯೆನಿಸಿ ನಿನಗೆ | ವಿಾರಿಹೋಯ್ತೆ ಗರ್ವವೆಂದು | ಭೂರಿ ಸರಳನೆಸೆಯಲಾ ಕು | ಮಾರನಾಕ್ಷಣಾ || ೧೧ ||

ರಾಗ ಭೈರವಿ, ಏಕತಾಳ.

ನಸುನಗುತಲೆ ಷಣ್ಮುದನಾ | ಶರ | ವಿಸರವ ಕಡಿಯುತ ಬಳನಾ || ತುಸ ಗಣಿಸದೆ ನಿಂದಿರಲೂ | ರ | ಕ್ಕಸ ಕಾಣುತ ಖಾತಿಯೊಳೂ || ೧ || ಬಾಲಕ

ನೆಂದೀವರೆಗೇ | ಬಿಡ | ಲಾಲಸ್ಯದಿ ನೀನೆಮಗೇ || ಕಾಳಗದೊಳು ಮಾರಾಂ ತು | ಬಹೆ | ಬಾಲಕ ಬಿಡಲಿನ್ನೆಂತೂ || ೨ || ತಡೆಯೆಂದೆನುತಾ ಕ್ಷಣದೀ | ಧರೆ | ನಡನಡುಗುವ ತೆರ ರಣದೀ || ಪಿಡಿಯುತ ಫಣಿಶರ ಕರದೀ | ಖತಿ | ವಿಡಿದೆಸೆದನು ತಾ ಭರದೀ || ೩ || ಗರುಡಕಳಂಬದಿ ಮುರಿಯೇ | ಕಂ | ಡರಿ ತಾ ರಕ್ಕಸ ಸರಿಯೇ || ತರಳನೆ ಪಾವಕಶರದಾ | ಸವಿ | ಪರಿಕಿಸೆನುತ ಸರಳು ಗಿದಾ || ೪ || ವರುಣಾಸ್ತ್ರದೊಳದ ಶರಜಾ | ತಾ | ನರಿಯಲ್ ಕಾಣುತ ದ ನುಜಾ || ಕರದಲಿ ಪವನನ ಧರಿಸೀ | ಬಹು | ಭರದಲಿ ಬಿಡಲಾ ಸಹಸೀ || || ೫ || ಪವನಾಶನಶರದಿಂದಾ | ಮುರಿ | ದವನಿಯೊಳಿಳುಹಿದನಂದಾ || ಭವನ ಕುಮಾರಕನೆಂದಾ | ದಾ | ನವ ತೋರಿಸು ಬಲುಹೆಂದಾ || ೬ ||

ಭಾಮಿನಿಷಟ್ಪದಿ.

ತೊಡೆದ ಶರಗಳನೆಲ್ಲ ಪಥದಲಿ | ಕಡಿಕಡಿದು ಕೆಡಹುತ ಕುಮಾರನು | ಧಡಿಗಸಂಗವನುಚ್ಚಳಿಸುವಂದದಲಿ ತೆಗೆತೆಗೆದೂ || ಬಿಡಲು ಮೂರ್ಛೆಯೊಳೊ ರಗಿ ದಾನವ | ಪೊಡವಿಯಿಂ ಕ್ಷಣಕೆದ್ದು ಖಾತಿಯೊ | ಳಡಿಗಡಿಗೆ ಪಲ್ಗಡಿದು ತಡದಿಂತೆಂದ ಸ್ಕಂದನನೂ || ೧ ||

ರಾಗ ಭೈರವಿ, ಅಷ್ಟತಾಳ.

ತರಳಾ ನೋಡಲು ರಣದೀ | ನಮ್ಮೊಳು ಸರಿ | ಸರಿಯೆನಿಸಿದೆ ಛಲದೀ || ಅರೆನಿಮಿಷದಿ ನಿನ್ನ | ಮುರಿಯುವೆ ನೋಡೆಂದು | ಶಿರಕೆಸಗಿದ ಚಾಪದೀ || || ೧ || ಕಡಿದು ಕೋದಂಡವನೂ | ಶರಜನಾಗ | ಧಡಿಗಾಗೆ ಶರಗಳನೂ || ಬಿಡಲು ಕೋಪದಿ ಚಾಪ | ಕಡಿದರೇನಿದ ನೋಡು | ಖಡುಗವನೆಂದೆನುತಾ || || ೨ || ಝಳಪಿಸುತಲೆ ದಾನವಾ | ಬರಲು ಕಂಡು | ಘಳಿಲನೆ ಶರಸಂಭವಾ || ಅಳವಿಯೊಳದ ಮುರಿ | ದಿಳೆಗೆ ಕೆಡಹೆ ದೈತ್ಯ | ತಳೆದಿರೆ ಗದೆಯನಾಗಾ || ೩ || ತಾರಕಾಂತಕನದರಾ | ಮುಕ್ಕಡಿಗೈಯೆ | ಭೂರಿಕೋಪದೊಳಸುರಾ | ಭಾರಿ ಮುಷ್ಟಿಯನೆತ್ತಿ | ಹಾರಲು ಮುಂದಕೆ | ವೀರಷಾಣ್ಮಾತುರನೂ || ೪ || ಕಡಿ ದಿಕ್ಕಿದನು ಭುಜವಾ | ದಾನವನಾಗ | ಘುಡುಘುಡಿಸುತ ಪಾದವಾ || ತಡೆಯ ದೆತ್ತುತ ಛಲ | ವಿಡಿದು ಬರಲು ಕಂಡು | ತಡೆಯದೆ ರುದ್ರಾಸ್ತ್ರವಾ || ೫ ||

ತೆಗೆದು ಕೂಣೀರದಿಂದಾ | ಗುರಿಯ ನೋಡಿ | ಆಗಜೆಯ ಬಾಲನಂದಾ || ತೆಗೆದು ಕಿವಿಯ ವರೆ | ಗೊಗೆದು ಬಿಡಲು ದೈತ್ಯ | ಸೊಗದಲಿ ಪವಡಿಸಿದಾ || ೬ ||

ವಾರ್ಧಿಕಷಟ್ಪದಿ.

ಶುಂಭಾಸುರಂ ಮಡಿಯಲೇನೆಂಬೆ ದೈತ್ಯಬಲ | ಮುಂಬರಿದು ಷಡ್ವದನನಂ ಮುಸುಕೆ ಖಾತಿಯಿಂ | ದಂಬುಗಳ ಸುರಿಸಿದಂ ಗಗನಭೂತಳದಿಗಂತವನೆಲ್ಲ ಕಣೆಗಳಿಂದಾ || ತುಂಬಿದಂ ಪೆಣಮಯವನೊಟ್ಟಿದಂ ಕಣನೊಳಗೆ | ಬೆಂಬಿಡದೆ ಬಹ ಶರಗಳಂ ಕಡಿದು ಕಂಗೆಡದೆ | ಮುಂಬರಿದು ವೈರಿಬಲದಾವಾನಲಂ ತಾನೆನಲ್ಕೆರೆದನೇನೆಂಬೆನೂ || ೧ ||

ಭಾಮಿನಿಷಟ್ಪದಿ.

ಕೊಂದು ಘೋರಾಸುರನಿಕುಂಭರ | ಕಂಧರವ ಹಾರಿಸಿ ನಿಶುಂಭನ | ಮುಂದಲೆಯ ಕಡಿದಿಕ್ಕಿ ಲಂಬನನಾ ಪ್ರವೀರನನೂ || ಅಂದದಿಂ ಪರಲೋಕಕೇರಿಸಿ | ಮುಂದೆ ಕೇಳಾ ಕಪಿಲಜಪಲರ | ನಂದದಿಂ ಜೈಮಿನಿಗೆ ಕಳುಹಿದ ಕ್ರೌಂಚದಾರಣನೂ || ೧ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಶರಜನೀ ತೆರದಿಂದ ಬಲವನು | ಮುರಿಮುರಿದು ಪರಿಭವಿಸೆ ದಾನವ | ರೆರೆಯ ಕೇಳಿದನೇನನೆಂಬೆನು | ರಾಮ ನಿನಗೇ || ೧ || ಅಂಧಕಾಸುರ ಕರದ ಧನುಶರ | ದಿಂದ ರಥವೇರಿದನು ಕಣ್ಣುಗ | ಳಿಂದ ಖಿಡಿಗೆದರುತ್ತ ತಾ ನಡೆ | ತಂದನಂದೂ || ೨ || ಇಕ್ಕೆಲದಿ ದಾನವರ ಬಲವಿರೆ | ರಕ್ಕಸಾಧಿಪ ಕೋಪಮನದೊಳು | ವೆಕ್ಕಳಿಸೆ ನಡೆತಂದನಾಗಲೆ | ಕಕ್ಕಸದಲೀ || ೩ || ಕಂಡು ಷಣ್ಮುಖನಾಗ ತಾ ಕೋ | ದಂಡವನು ಝೇಗೈದು ರಕ್ಕಸ | ತಂಡವನು ಮುರಿಯಲ್ಕೆ ಕಣನೊಳ | ಗಂಡಲೆದನೂ || ೪ || ಕಾಣುತಲೆ ಷಣ್ಮುಖನ ದಾನವ | ಕೇಣಗೊಂಡಸೆದೊಂದು ಸಾಸಿರ | ಬಾಣವನು ತರಿಯಲ್ಕೆ ಕಂಡಾ | ದಾನವೇಂದ್ರಾ || ೫ ||

ರಾಗ ಮಾರವಿ, ಏಕತಾಳ.

ಆರೆಲೊ ಬಾಲಕ | ತೋರೆಲೊ ಪೌರುಷ | ಭೂರಿ ಬಲವನೆಲ್ಲಾ || ಧಾರುಣಿಯಲಿ ನೀ | ಭೋರನೆ ಕೆಡಹಲು | ಪರಿತೆ ಮದಗರ್ವಾ || ೧ || ಝು

ಡಿದೀ ಖಡ್ಗದಿ | ಕಡಿಯುವೆ ಗಳವನು | ತಡೆಯುವರಾರೆಂದೂ || ಹುಡುಗನೆ ಪೇಳ್ವ | ಕಡುಗಲಿತನವನು | ಕಡಿದೀಡಾಡುವೆನೂ || ೨ || ಎನೆ ಕೇಳುತ ಬಹು | ಕಿನಿಸಿನೊಳಾ ಗುಹ | ಧನುಶರಗಳ ಪಿಡಿದೂ || ದನುಜನ ಸೀಳುವೆ | ನನುವರದೊಳಗೆನು | ತನುವಾದನು ಧುರಕೇ || ೩ || ಖಿಡಿಖಿಡಿಯಾಗುತ | ಧಡಿಗನು ಶರಗಳ | ಗಡಣವ ಸುರಿಸುತಲೀ || ತಡೆಯದೆ ಗರ್ಜಿಸೆ | ನಡು ಪಥದೊಳಗದ | ಕಡಿದಿಕ್ಕುತ ಶರಜಾ || ೪ || ಕ್ಷುಲ್ಲ ದನುಜ ತಡೆ | ಕೊಲ್ಲುವೆನೀಕ್ಷಣ | ಬಲ್ಲಿದನಾಗಿಹೆಯಾ || ಚಲ್ಲಬಡಿನೆ ನಿಲು | ನಿಲ್ಲೆಂದೆನುತಲಿ | ಬಿಲ್ಲನು ಝೇಗೈದೂ || ೫ ||

ವಾರ್ಧಿಕಷಟ್ಪದಿ.

ದುರುಳನಂ ಕೊಲ್ವೆನೆಂದೆಣಿಸಿ ಕೋಪದಲಿ ಷಟ್ | ಶಿರನಾಗ ತೂಣೀರದೊಳ್ ಮೆರೆವ ವರರುದ್ರ | ಶರಕೆ ಕೈಯಿಕ್ಕಿದಂ ಮೂಜಗಂ ತಲ್ಲಣಿಸಲೇನೆಂಬೆನಾಕ್ಷಣದಲೀ || ವರಜಟಾಮಂಡಲಂ ಮೆರೆಯುತಿರಲೈತಂದ | ವರ ರುಂಡಮಾಲ ಕಾಲಾಂತಕಂ ಶೂಲಮಂ | ಧರಿಸಿ ಗಣಬಲದೊಡನೆ ಬರುತಿರಲ್ ಕಂಡಾಗಲಾ ವೀರ ಷಡ್ವದನನೂ || ೧ ||

ರಾಗ ಮಧುಮಾಧವಿ, ತ್ರಿವುಡೆತಾಳ.

ಕರದ ಧನುಶರವಿಳುಹಿ ಪಾದದೊ | ಳರಗೆ ಶರಜನನೆತ್ತಿ ಶಂಕರ | ಪರಿಪರಿಯ ಮನ್ನಿಸುತ ಹರುಷದಿ | ದುರುಳ ರಕ್ಕಸಬಲವ ಮುರಿದೆಯ | ಧುರದಿ ನಿನಗೇ || ೧ || ಸರಿಯಿಹರೆ ಮೂಲೋಕದೊಳಗೆನೆ | ಶರಜನುಸುರಿದ ನಿಮ್ಮ ದಯದಲಿ | ತರಿದಿಹೆನು ಖೂಳರನು ರಕ್ಕಸ | ರೆರೆಯನುಳಿದಿಹನೊಬ್ಬ ನಾತನ | ತರಿವೆನೆನಲೂ || ೨ || ಬೇಡ ತಡೆ ನಿನಗವನ ಬವರದ | ತಾಡನೆಯು ತನ್ನಿಂದ ಪುಟ್ಟದ | ಕೋಡಗಲಾ ದೈತ್ಯನಾತನು | ನೋಡುತಿರು ಧುರಗೊಡುವೆ ಷಮ್ಮಿನ,| ಕೋಡ ಮುರಿವೇ || ೩ || ಎಂದೆನುತ ಸಂತೈಸುತಿರಲದ | ನಂಧಕಾಸುರ ಕಂಡು ಪಾದಗ | ಳಿಂದ ಧರಣಿಯ ಝಡಿದು ಪಲ್ಗಡಿ.| ದಿಂದುಧರನನು ನೋಡಿ ಪೇಳಿದ | ನಂದು ಜರೆದೂ || ೪ || ಚಂದ್ರಧರ ಭಸ್ಮಾಸುರನ ಭಯ | ವೆಂದಿಗಳಿಯಿತು ಪೇಳು ನಮ್ಮೊಡ | ನಿಂದು ಧುರಗೊಡಲಹಹ ಧೈರ್ಯವು | ಬಂದುದೇ ಮೆಚ್ಚಿದೆನು ಮೆಚಿ ದೆ | ನೆಂದನಾಗಾ || ೫ ||

ಕಂದ.

ಧಡಿಗನ ನುಡಿಯಿಂ ಮಾನಸ | ಕಡುಗುದಿಯಲ್ಕೋಪಾನಲನಿಂ ಮೃಡ
ನಾಗಂ || ಕಡೆದಿನವಾಯ್ತೆನೆ ಸೃಷ್ಟಿಗೆ | ಪಿಡಿದಂ ಶೂಲವ ನಭವಂ ಕೇಳ
ದ್ಭುತಮಂ || ೧ ||

ವಾರ್ಧಿಕಷಟ್ಪದಿ.

ಇಳೆಯದುರಿತಷ್ಟದಿಗ್ಗಜಗಳಳುಕಿದವಾಗ | ಲಳಿಕಾಲವಾಯ್ತೆಂದು ಜೀ
ವಿಗಳ್ ಬೆದರಿದವು | ನಳಿನಸಂಭವಮುಖ್ಯ ಸುರರೆಲ್ಲ ಹರನ ಕೊಂಡಾಡಿದರ್
ಜಲನಿಧಿಯೊಳೂ || ಘುಳುಘುಳಿಸಿ ಪೇರ್ದೆರೆಗಳೆದ್ದು ಬರುತಿರೆ ಹರನ | ಗಳ
ದೊಳಿರುವ ಭುಜಂಗ ಬುಸುಗುಟ್ಟಿ ಕೋಪದಿಂ | ಖಳನ ಮೂದಲಿಸಿ ಮಾತಾ
ಡಿಸಿದ ವರಜಟಾಜೂಟಿ ಧೂರ್ಜಟಿ ಗರ್ಜಿಸೀ || ೧ ||

ರಾಗ ಭೈರವಿ, ಅಷ್ಟತಾಳ.

ದುರುಳಾ ರಕ್ಕಸ ನಿನಗೇ | ಗರ್ವವು ನೋಡೆ | ಶಿರಕೇರಿರುವುದು ಮಿ
ಗೇ || ಮುರಿಯುವೆ ಭುಜಬಲ | ದಿರವ ತೋರಿಸೊ ಶೂಲ | ದಿರವ ಕಾಣಿಸು
ಪೆನೆಂದಾ || ೧ || ಖಳನೆಂದ ಶೂಲದಲೀ | ತಿವಿಯೆ ಕಾಡೊ | ಕಿಲಿಯಿರೆ ಬಿಲ
ಗಳಲೀ || ಘಳಿಲನೆ ಹುಡುಕೆಂದು | ಖಳನುಸುರಲು ಕೇಳಿ | ಮಲತೆಂದ ಶಿತಿ
ಕಂಠನೂ || ೨ || ಜನುಮವಿತ್ತವನಾರೆಲ | ಸುಮ್ಮನೆ ಸಾಯು | ಲೆನುತ ಬಂದಿ
ಹೆಯ ಭಲಾ || ಮನೆಯ ಮೂಷಿಕ ನಿನ್ನ | ಘನತರ ಬಲುಹ ತಾ | ನೆನಿತಿದೆ
ನೋಡುವೆನೂ || ೩ || ಬಲ್ಲದನಹುದು ನೀನೂ | ಬಲ್ಲೆನು ಕೇಳು | ಫುಲ್ಲಲೋ
ಚನನೆಂಬನೂ || ಎಲ್ಲಿಹನೆಂಬುದ | ನೆಲ್ಲ ಪೇಳೆನೆ ಗೌರಿ | ವಲ್ಲಭನಿಂತೆಂದನೂ ||
|| ೪ || ಹರಿಯೆಲ್ಲಿರುವನೆಂಬುದಾ | ಪೇಳುವೆ ಕೇಳೊ | ದುರುಳ ದಾನವ ನೀ
ನದಾ || ಅರಿತುಮಾಡುವುದೇನು | ಮರೆಯಾಗಿರುವ ನಿನ್ನ | ಉರದೊಳಗೆನೆ
ಕೇಳುತಾ || ೫ || ಅಂಧಕಾಸುರ ಕೋಪದೀ | ಪೇಳಿದ ನೀವು | ಒಂದಾಗಿರಲು
ರಣದೀ || ಬಂದುದ ಕಾಂಬೆನು | ಕೊಂದಿಹ ಹರಿ ನಮ್ಮ | ತಂದೆಯನೇಕೆ ಪೇ
ಳೊ || ೬ || ಧರೆಯ ರಸಾತಲಕೆ | ಕೇಳೆಲೊ ದುಷ್ಟ | ದುರುಳ ತಾನ್ಯೊದ
ನೇಕೇ || ಶರಿದನದಕೆ ನಿನ್ನ | ಹಿರಿಯನ ಹರಿಯು ಕೇಳ್ | ಒರೆಯುವದೇನೆಂ

ದನೂ || ೭ || ಮೃಗಚರ್ಮಧಾರಿ ಕೇಳೂ | ಸಾರಿದೆ ವ್ಯರ್ಥ | ನಗಧರಗಾಗಿ ಬಾಳೂ || ಮಿಗಿಲು ಕೆಡಿಸಿಕೊಂಬೆ | ಜಗದೊಡೆಯನೆ ನಮ್ಮ | ಹಗೆತನದಲಿ ಸಾಯುವೇ || ೮ ||

### ಭಾಮಿನಿಷಟ್ಪದಿ.

ಅಂಧಕಾಸುರನಿಂತೆನಲು ಸಿತ | ಕಂಧರನು ನಸುನಗುತ ಪೇಳಿದ | ಮಂದಮತಿ ನೀನೆನ್ನ ಕೊಲ್ಲುವ ಮೊದಲು ವಾಹಿನಿಯಾ || ದಂದುಗವನೆಲ್ಲವನು ಕಣ್ಣಿನೊ | ಳಿಂದು ನೋಡೆಂದೆನುತ ಶಂಕರ | ನಂದು ಮಡಿದಿಹ ಬಲವ ತೋರಿಸೆ ದೈತ್ಯ ಹೂಂಕರಿಸೀ || ೧ ||

### ರಾಗ ಭೈರವಿ, ಏಕತಾಳ.

ಬಲವೆಲ್ಲವ ಕೊಂದಿರುವಾ | ತವ | ಬಲವನು ಮುರಿಯುವೆನು ನಭವಾ || ಕಳುಹುವೆನವರೊಡನೀಗಾ | ನೀ | ನಳಲದೆ ಪೋಗೈ ಬೇಗಾ || ೧ || ಎಂದೆನುತಲೆ ಪೊಸಮಸೆಯಾ | ಶರ | ವೊಂದನು ಧಡಿಗರ ರಾಯಾ || ಸಂಧಿಸಿ ಧನುವಿನೊಳಾಗಾ | ಬಿಡ | ಲಂದಾ ರಕ್ಕಸ ಬೇಗಾ || ೨ || ಶೂಲವ ಪಿಡಿದಾಕ್ಷಣದೀ | ಖತಿ | ತಾಳುತ ಶಂಕರ ಮನದೀ || ಖೂಳನ ಶರವನು ಕಡಿದೂ | ತಾ | ಪೇಳಿದನಾಗಲೆ ಮುಳಿದೂ || ೩ || ಕೆಡದಿರು ಧಡಿಗನೆ ಬರಿದೇ | ಶಿರ | ಕಡರಿದ ಗರ್ವವ ಮುರಿದೇ || ಕಡೆಗಾಲವ ತೋರಿಸುವೇ | ನಾ | ಮೃಡನೆಂದರಿಪೆಯ ಮಿಗವೇ || ೪ ||

### ಕಂದ.

ಶೂಲಿಯ ನುಡಿಯಂ ಕೇಳ್ದಾ | ಖೂಳಂ ಧನುವಂ ತನುವಂ ತೂಗುತಲಾಗಂ || ಪೇಳ್ದಂ ಮೃತಿರಹಿತನೆ ನೀ | ಕೇಳ್ದಿಹೆನೆನುತಲಿ ಮುಳಿದಾ ಖಳನಿಂತೆಂದಂ || ೧ ||

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಮೃಡನು ನೀನಹುದಹುದು ಭಸ್ಮನು | ಕಡುಗಿ ಬೆಂಬತ್ತಿದರೆ ತಿರುಗಿದೆ | ಪೊಡವಿಯೆಲ್ಲವನೇಕೆ ಪೇಳೆ | ನ್ನೊಡನೆ ಬೇಗಾ || ೧ || ಎಂದೆನುತ ದಾನವನು ಕೋಪದೊ | ಳಂದು ಹೂಡಿದ ವಾಯುಶರವನು | ಮಂದಮತಿ ಗುರಿ ನೋ

ಡುತಾಗಲೆ | ಚಂದ್ರಧರಗೇ ‖ ೨ ‖ ಕಂಡನಾಗಲೆ ನಾಗಭೂಷಣ | ಕೆಂಡ
ದಂತುರಿಮಸಗಿ ತಾ ಕೈ | ಕೊಂಡನಾಗಲೆ ಗಳದ ಸರ್ಪನ | ಖಂಡಪರಶೂ ‖
‖ ೩ ‖ ವಿಷವ ಕಾರುತ್ತಿರಲು ಹೂಡಿದ | ನಸಮವಿಕ್ರಮಿ ಪೇಳಲೇನ್ ಖಳ |
ನೆಸೆದ ಬಾಣವು ಕಾಣದಂ | ತಸವಸದೊಳಡಗೇ ‖ ೪ ‖ ಖಿಡಿಯುಗುಳುತಾ
ರ್ಭಟಿಸಿ ದಾನವ | ನಡಿಗಡಿಗೆ ಪಲ್ಗಡಿದು ಕರದಲಿ | ಪಿಡಿಯುತಾಗಲೆ ತಿಮಿರ
ಶರವನು | ಕಡುಹಿನಿಂದಾ ‖ ೫ ‖ ಬಿಡುನೆ ನೋಡೀ ಶರವ ಗೆಲಿದರೆ | ಕಡು
ಹುಗಾರನು ನೀನೆನುತ ಗುರಿ | ವಿಡಿದು ಕಿವಿವರೆಗೆಳೆದು ಬಿಟ್ಟನು | ಧಡಿಗನಾ
ಗಾ ‖ ೬ ‖ ದುರುಳನೆಸೆದಸ್ತ್ರವನು ಕಾಣುತ | ಕಿರುನಗೆಯೊಳಾ ಚಂದ್ರಚೂ
ಡನು | ದುರುಳರಕ್ಕಸ ಭಾಸ್ಕರನ ಕ | ಣ್ಣಿರುವದೆನಗೇ ‖ ೭ ‖ ತಿಮಿರದಿಂ
ದೇನಹುದು ಸುಮ್ಮನೆ | ಭ್ರಮಿತನಾಗದಿರೆನುತ ಪೇಳ್ದಾ | ಸುಮನಸಾರ್ಚಿತ
ಗೆಲಲು ತಿಮಿರವ | ನಮರವೈರೀ ‖ ೮ ‖

ರಾಗ ಪೂರವಿ, ಏಕತಾಳ.

ಧೀರನಹೆಯ ಪೂ | ರಾರಿಯೆ ಪೌರುಷ | ತೋರಿಸು ತನ್ನೊಡನೇ ‖
ಘೋರನೆ ತವ ಬಲ | ದೋರನೆ ಕಾಣುವೆ | ವಾರಿಧಿಗೆಸೆಯುವೆನೂ ‖ ೧ ‖
ಎಂದೆನುತಲಿ ಶರ | ವೃಂದವ ಸುರಿಸಲು | ಚಂದ್ರಧರನು ತರಿದೂ ‖ ಮಂಡ
ಮತಿಯೆ ಜಯ | ವೆಂದೆಂದಿಗು ಸಿಗ | ದೆಂದನು ಖಾತಿಯಲೀ ‖ ೨ ‖ ಖಿಡಿ
ಯುಗುಳುತ ಖಳ | ರೊಡೆಯನು ನಗಶರ | ಪಿಡಿಯುತ ಕರದೊಳಗೇ ‖
ಮೃಡ ನೀನಾಗಿರೆ | ತಡೆಯೆನುತಾಕ್ಷಣ | ಹೊಡೆದನು ಕೋಪದಲೀ ‖ ೩ ‖
ತಡೆಯಲು ಶೂಲದೊ | ಳುಡಿಯಲು ಪರ್ವತ | ಧಡಿಗ ಮದಾಂಧಮನೂ ‖
ಕಡೆಗಾಣದೆ ಕೆಂ | ಗಿಡಿಗಳ ಸೂಸುತ | ಮೃಡನಂ ನೋಡುತಲೀ ‖ ೪ ‖

ವಾರ್ಧಿಕಷಟ್ಪದಿ.

ಅರೆನಿಮಿಷ ಬಿರಗಾಗಿ ಬಳಿಕ ಬಾಣಂಗಳಂ | ಸುರಿಸುತಿರೆ ದೈತ್ಯೇಯ
ಬಾಣಂಗಳದನೆಲ್ಲ | ಹರನು ಶೂಲದಿ ವಹಿಲದಿಂ ತರಿಯುತಿರೆ ದಾನವಂ ಖಡ್ಗ
ಮಂ ಝಳಪಿಸೇ ‖ ಶಿರವರಿವೆನೆಂದು ಮುಂದೈತರಲ್ ಪೂರಾರಿ | ಪರಿಕಿಸುತ
ಮುಂದೈದಿ ಖಾತಿಯಿಂ ತಿರುತಿರುಹಿ | ಕರದ ಶೂಲದೊಳಿರಿದು ದೈತ್ಯೇಂದ್ರ
ನಂ ಘೋರನೆತ್ತಿದಂ ಪರಮೇಶನೂ ‖ ೧ ‖

ಭಾಮಿನಿಷಟ್ಪದಿ.

ದುರುಳ ದೈತ್ಯನ ಗರ್ವಗಿರಿ ತಾ | ಜರಿಯಿತಾರಿತು ಕ್ರೋಧಶಿಖಿ ಕೇ | ಳೊರತೆಯಾಯಿತು ಜ್ಞಾನವಾರಿಯ ಭಕುತಿ ತಲೆದೋರೇ || ಹರನ ಮಹಿಮೆ ಯು ಹೊಳೆಯೆ ಶಂಕರ | ದುರಿತದಾವಾನಲನೆ ತನ್ನನು | ಪೊರೆಯೆನುತ ನುತಿ ಸಿದನು ಭಕ್ತಿಯೊಳಂಗಜಾಂತಕನಾ || ೧ ||

ರಾಗ ಸುರುಟಿ, ಆದಿತಾಳ.

ಜಯಜಯ ಮಹದೇವಾ | ಜಯಜಯ | ಜಯಜಯ ಮಹದೇವಾ || ಜಯಜಯ ಶಂಕರ | ಭಯಹರ ಮೃಗಧರ | ದಯ ತೋರಂಬುಜ | ನಯನ ಮನೋಹರ || ಜಯ || ೧ || ಚಂದ್ರಧರನೆ ಹರನೇ | ಸುರವರ | ವಂದಿತ ಪದಯುಗನೇ || ಕಂದುಗೊರಳ ಗೋ | ವಿಂದಸಖನೆ ಜಯ | ನಂದಿಯ ವಾ ಹನ | ಯಿಂದೆನ್ನನು ಪೊರೆ || ಜಯ || ೨ || ಶಂಭೊ ಶಿವನೆ ಭವನೇ | ಪೊರೆ ಜಗ | ದಂಬೆಯರಸ ಮೃಡನೇ || ಕುಂಭಿನಿಯಲಿ ಮುಗು | ಳಂಬಿನನಿರಿದ ತ್ರಿ | ಯಂಬಕ ಪ್ರಮಥಕ | ದಂಬವಿನುತ ಜಯ || ಜಯ || ೩ || ಖಂಡಪ ರಶುಧರನೇ | ದಾನವ | ತಂಡವಿದಾರಣನೇ || ದಂಡಧರನ ಮದ | ಖಂಡಿಸಿ ದಾ ಭೂ | ಮಂಡಲದೊಡೆಯ ಪ್ರ | ಚಂಡ ಜಟಾಧರ || ಜಯ || ೪ ||

ವಾರ್ಧಿಕಷಟ್ಪದಿ.

ಪೊರೆ ಶಂಭೊ ಮೃತ್ಯುಂಜಯಾನಂದ ದೇವ ದೇ | ವರ ದೇವ ಶಿವ ಶೂಲಿ ಪರಮೇಶ ವರಜಟಾ | ಧರನೆ ಧೂರ್ಜಟಿಯೆ ಗಂಗಾಧರನೆ ಹರನೆ ಜ ಯಜಯವೆಂದು ನುತಿಸುತಿರಲೂ || ಪರಮ ಕರುಣಾಸಿಂಧು ಗಗನದಿಂದಿಳಿಗಿ ಳಹಿ | ವರವ ಬೇಕಾದುದಂ ಬೇಡು ಮೆಚ್ಚಿದೆನೆನಲು | ಮರುಗಿ ರಕ್ಕಸರಾ ಯನಿಂತೆಂದ ಗೌರಿಯರಸನ ಪಾದಮಂ ಸ್ಮರಿಸುತಾ || ೧ ||

ರಾಗ ಕೇತಾರಗೌಳ, ಝಂಪೆತಾಳ.

ಆವ ವರವನು ಬೇಡಲೀ | ತವ ಪಾದ | ಭಾವನೆಯು ಮನದೊಳಿರಲೀ || ಕಾವ ಪರಮಾತುಮನೆ ನಿನ್ನ | ಅನುದಿನವು | ಸೇವಿಸುತಲಿರುವೆ ಮುನ್ನ || ೧ || ಕರುಣೆಯೊಂದಿರಿಸೆನ್ನೊಳೂ | ಮರೆಯದಿರು | ಶರಣನೆಂಬುದ ಮನದೊಳೂ||

ದುರುಳತನದಿಂ ಪೇಳಿದೇ | ಮಾತುಗಳ | ಮರೆಯೆಲ್ಲವನು ಗುಣನಿಧೇ || ೨ ||
ಹರಿಹರರ ಮಹಿಮೆಗಳನೂ | ಮೂಢ ನಾ | ನರಿಪೆಯೆಂತೋ ಪರಿಯನೂ ||
ದುರಿತಭವಸಾಗರವನೂ | ದಾಟಿಸುವ | ಕರುಣನಿಧಿಗಳ ತಿಳಿದೆನೂ || ೩ || ಕ
ರುಣನಿಧಿ ತನ್ನೆಡೆಯೊಳೂ | ನೀನೀಗ | ಹರುಷದಿಂ ಕುಣಿದಾಡಲೂ || ಭರಿತ
ಸಂತಸವಪ್ಪುದೂ | ಮುದದಿಂದ | ವರವಿದೊಂದಂ ಕೊಡುವುದೂ || ೪ ||

### ಭಾಮಿನಿಷಟ್ಪದಿ.

ಎಂದ ಮಾತನು ಕೇಳಿ ಶಂಕರ | ಮಂದಹಾಸದಿ ದೈತ್ಯನೆಡೆಯಲಿ |
ಚಂದದಿಂ ಕುಣಿದಾಡಿ ಸಂತಸದಿಂದಲಿಂತೆಂದಾ || ಸಂದುದೇನಿನ್ನಿಷ್ಟದಾನವ |
ವೃಂದದೊಡೆಯನೆ ಮೆಚ್ಚಿದೆನು ನಿನ | ಗಿಂದು ದಯಪಾಲಿಸಿದೆ ಗಣಪದವಿ
ಯನು ಕೇಳೆಂದಾ || ೧ ||

### ರಾಗ ಸುರುಟಿ, ಏಕತಾಳ.

ಗಣಪದವಿಯ ಕೊಡಲೂ | ದೈತ್ಯಗೆ | ಗಣಗಳು ಹರುಷದೊಳೂ ||
ವನಜಾಂಬಕನಂ | ವಿನಯದಿ ಪಾಡುತ | ಕುಣಿಕುಣಿದಾಡಿದ | ರನುನಯ
ದಿಂದಲೀ || ೧ || ಸುರಜನರಿದನೆಲ್ಲಾ | ಕಾಣುತ | ನೆರೆದಿರೆ ಬಳಿಯೆಲ್ಲಾ || ಪರಿ
ಕಿಸಿ ಶಂಕರ | ಹರುಷದೊಳೆಲ್ಲರ | ಪರಿಪರಿ ಮನ್ನಿಸಿ | ಮೆರೆದನು ಕೇಳೈ ||
|| ೨ || ಶರಜನ ವಾಸವನಾ | ಬಳಿಕಾ | ಸರಸಿಜಸಂಭವನಾ || ಕರೆದತಿಮನ್ನಿ
ಸಿ | ಹರುಷದಿ ಶಂಕರ | ಮೆರೆದನು ಕೇಳದ | ನೊರೆಯುವದೆಂತೈ || ೩ ||
ಬಳಿಕಾ ಶಂಕರನಾ | ವಂದಿಸಿ | ನಳಿನಜ ಸುರವರನಾ || ಘಳಿಲನೆ ತಾನೊಡ |
ಗೊಳುತಾಗಲೆ ರಣ | ದಿಳೆಯನು ಕಳೆಯುತ | ನಿಳಯವ ಸೇರಿದ || ೪ ||

### ಭಾಮಿನಿಷಟ್ಪದಿ.

ಬಳಿಕ ಗಣಬಲದೊಳಗೆ ದುಂದುಭಿ | ಮೊಳಗುತಿರೆ ಶಂಕರನು ರಜತಾ |
ಚಲವ ಸೇರಿದ ಶರಣಹೃದಯಾನಂದನೆಂದೆನಿಸೀ || ಬಳಿಕ ಗಿರಿಜೆಯ ಗೂಡಿ
ಸಂತಸ | ದಳೆದು ತಾನೊಪ್ಪಿರ್ದ ಭಕತರ | ಸಲಹುವವನೆಂದೆನಿಸಿ ಕೈಲಾಸ
ದಲಿ ಪರಶಿವನೂ || ೧ ||

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಎಂದೆನುವ ಕಥೆಯೆಲ್ಲವನು ಸಿತ | ಕಂಧರನ ದಯದಿಂದಲಾ ಸುರ | ವಂದ್ಯ ಬಸವೇಶ್ವರನು ಪೇಳಿದ | ನಂದದಿಂದಾ || ೧ || ಕೇಳುತಾ ವರ ಸಿದ್ಧ ರಾಮನು | ತಾಳಿ ಮನದೊಳಗಧಿಕ ಹರುಷವ | ಫಾಳನಯನನ ನುತಿಸಿ ಸಂ ತಸ | ಲೋಲನಾದಾ || ೨ || ಚರಿತೆಯೆಲ್ಲವನರುಹಿದೆನು ತ | ಪ್ಪಿರಲು ತಿದ್ದು ವುದೆಲ್ಲ ವಿಬುಧರು | ಮೆರೆಸುವುದು ಸತ್ಕೀರ್ತಿಯನು ಸತ್ | ಪುರುಷರಾಗೀ || || ೩ || ದೇವಿ ಕನ್ನಡರಾಣಿಯಾ ಪದ | ಸೇವೆಮಾಡುವ ಮನದಿ ಬರೆದೆನು | ಭಾವಿಸುತ ಭಾಷಾಭಿಮಾನವ | ಸೇವಿಸುವುದೂ || ೩ ||

ಭಾಮಿನಿಷಟ್ಪದಿ.

ಕೊಳಲನೂದುವ ದೇವ ಲೋಕದೊ | ಳಳಲುವರಿಗೆ ಸಹಾಯವನೆ ತಾಂ | ಬೆಳೆಯಿಸುತಲೀ ಪದದ ಷಟ್ಪಾದಾದಿಯಕ್ಕರನಾ || ಪುಳಕಜಲದಲಿ ಪೊರೆದು ಪರದ | ಟ್ಟಳಿಗೆಯನ್ನೇರಿಸಲಿ ಪೋಣ್ಕಾಂ | ಣಳಲುತಿರೆ ದರ್ಶನವನೀ ಯಲಿ ತೋಯಜಾಂಬಕನಾ || ೧ ||

ರಾಗ ಆಹೇರಿ, ಝಂಪೆತಾಳ.

ಜಯಮಂಗಳಂ | ನಿತ್ಯ | ಶುಭಮಂಗಳಂ || ಪಲ್ಲ || ಚಂದ್ರಶೇಖರಗೆ ಗಿರಿ | ನಂದನೆಯ ರಮಣನಿಗೆ | ಮಂದರಾಧರನ ಸಖ | ನೆಂದೆನಿಸಿದಾ || ನಂ ದಿವಾಹನ ಮಹಾ | ನಂದಮೂರುತಿಗೆ ಸುರ | ವೃಂದವಂದಿತಗೆ ಪಾ | ದಾಂ ಭೋಜಗೇ || ಜಯ || ೧ || ಗಜಚರ್ಮಧಾರನಿಗೆ | ಭುಜಗಭೂಷಣಗೆ ಪದ | ಭಜಕಜನವರದನಿಗೆ | ಅಜವಂದ್ಯಗೇ || ರಜತಗಿರಿವಾಸನಿಗೆ | ರಜನೀಶಶೋಭ ನಿಗೆ | ಸುಜನಜನವಿನುತ ಕರು | ಣಾಂಬುನಿಧಿಗೇ || ಜಯ || ೨ || ಮಂಗ ಳಾಂಗನಿಗೆ ವರ | ಗಂಗಾಧರಗೆ ಮೂರು | ಕಂಗಳಿಂ ಮೆರೆವ ಶಿತಿ | ಕಂಧರ ನಿಗೇ || ಅಂಗಜಾರಿಗೆ ಭಕತ | ರಿಂಗೆ ಹಿತವೀವ ಮಾ | ತಂಗದನುಜಾರಿ ಶ್ರೀ | ಶಂಕರನಿಗೇ || ಜಯಮಂಗಳಂ | ನಿತ್ಯ | ಶುಭಮಂಗಳಂ || ೩ ||

**ಅಂಧಕಾಸುರನ ಕಾಳಗವು ಸಂಪೂರ್ಣವು.**



ಅಮರಪಡ್ನೂರು ಬೋರ್ಡುಶಾಲೆಯ ಮುಖ್ಯೋಪಾಧ್ಯಾಯರಾದ

**ಕೊಳಂಬೆ ಪುಟ್ಟಣ್ಣಗೌಡರಿಂದ ವಿರಚಿತವಾದ**

ಈ ಪುಸ್ತಕವು

**ಪಾವಂಜೆ ಗುರುರಾವ್**

ಇವರ

**ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ**

ಮುದ್ರಿಸಲ್ಪಟ್ಟು,

**ಉಡುಪಿ ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ**

ಪ್ರಕಟಿಸಲ್ಪಟ್ಟಿತು.

ಶಾ। ಶಕ ೧೮೫೦. 1928.